ದವಾಖಾನಿಯಿಂದ ಬಂದ ದಿನಾನೇ ಏನೇನಾತು ಎಲಾ ಹೇಳಿಬಿಟ್ಟೆ. ಮತ್ತ ಇದರೊಳಗ ನಿಂದೇನೂ ತಪ್ಪಿಲ್ಲಾ. ನಾನs ಸಂಯಮ ಕಳಕೊಂಡೆ. ದೊಡ್ಡ ಮನಸ್ಸುಮಾಡಿ ಕ್ಷಮಾ ಮಾಡು ಅಂತನೂ ಹೇಳೇನಿ. ಒಂದೆರಡ ದಿನ ಒದರ್‍ಯಾಡತಾಳ. ಮುಂದ ಕೂಸಿನ್ನ ನೋಡಿ ಮರೀತಾಳ. ನೀನೂ ಆಕೀಗೆ ತಿರಗಿ ಮಾತಾಡಬ್ಯಾಡಾ, ನಾಲ್ಕ ಬಯ್ದುರ ಬಯ್ಸಿಕೋ" ತಗ್ಗಿದ ದನಿಯಲ್ಲೇ ಹೇಳುತ್ತಿದ್ದ.

"ಶೀಲಾs ಶೀಲೀs ಎಲ್ಲಿ ಸತ್ತೀಯಽ ?" ಮಾಲಾ ತನ್ನ ಕೋಣೆ ಯಿಂದ ಒಮ್ಮೆಲೆ ಚೀರಿದಳು. ಬೆಚ್ಚಿದ ಶೀಲಾ ಎದ್ದು ಮೋಹನನನ್ನು ಹೊರಳಿ ನೋಡುತ್ತ ಬಾಣಂತಿಯ ಕೋಣೆಗೆ ಹೋದಳು. ಬಲಿಯಾಗಲು ಹೊರಟ ಕುರಿಯಂತಾಗಿತ್ತು ಅವಳ ಸ್ಥಿತಿ. ಅವಳನ್ನು ಈ ಪರಿಸ್ಥಿತಿಗೆ ತಂದೊಡ್ಡಿದ ಮೋಹನ ಮತ್ತೊಂದು ಕುರಿಯಾಗಿ ತಲೆ ತಗ್ಗಿಸಿದ.

ಎರಡು ಮಕ್ಕಳ ತಂದೆಯಾಗಿದ್ದ ತಾನು ಏಕಿಷ್ಟು ಚಂಚಲಚಿತ್ತನಾದೆ ಎನ್ನುವದೇ ತಿಳಿಯದು. ಕಾಲೇಜು ಕಲಿಯುವಾಗಿನಿಂದ ತನ್ನ ಮನೆಯಲ್ಲಿದ್ದ ಶೀಲಾ ಅಕ್ಕನಿಗೆ ಕೆಲಸದಲ್ಲಿ ಸಹಾಯ ಮಾಡುತ್ತ ಮಕ್ಕಳನ್ನು ಆಡಿಸುತ್ತ, ತಿಳಿ ಯದ ಪಾಠಗಳನ್ನು ತನ್ನಿಂದ ಹೇಳಿಸಿಕೊಳ್ಳುತ್ತ ಬುದ್ಧಿವಂತ ಚುರುಕು ಹುಡುಗಿಯಾಗಿ ಬೆಳೆದಿದ್ದಳು. ಪದವಿ ಪಡೆದ ಮೇಲೆ ಟೈಪಿಂಗ ಕಲಿತು ಎಲ್. ಆಯ್.ಸಿ.ಯಲ್ಲಿ ಕೆಲಸಕ್ಕೆ ಸೇರಿ ಮಧ್ಯಮ ವರ್ಗದ ತಂದೆಯ ಭಾರ ವನ್ನು ಹಗುರು ಮಾಡಿದ್ದಳು. ಮಾವನವರು ಶೀಲಾಳಿಗಾಗಿ ವರ ಹುಡುಕು ತ್ತಿದ್ದರು. ತಾನೇ ಸ್ವತಃ ಕೆಲವರಿಗೆ ಕನ್ಯೆಯನ್ನು ತೋರಿಸಿದ್ದ. ಅವಳ ರೂಪ, ವಿದ್ಯೆಗೆ ಯಾವ ಪುಣ್ಯವಂತ ಅವಳ ಕೈ ಹಿಡಿಯುವನೋ ಎಂದುಕೊಳ್ಳುತ್ತಿದ್ದ. ಆದರೆ ಬಂದವರಿಗೆ ಇವರ ಯೋಗ್ಯತೆಗೆ ಮೀರಿ ದಕ್ಷಿಣೆ ಬೇಕಾಗಿತ್ತು. ಅರವಿಂದ ತನ್ನ ಸೋದರತ್ತೆ ಸುಂದರಕ್ಕನಿಗೆ ದೂರದ ಸಂಬಂಧ, ಶೀಲಾಳಷ್ಟೇ ಕಲಿತವ. ಇನ್ನೂ ಕಾಯಂ ನೌಕರಿ ಸಿಕ್ಕಿರಲಿಲ್ಲ. ಅವನೊಡನೆ ಶೀಲಾಳ ಮದುವೆಯ ಮಾತು ಮುಗಿದಿತ್ತು. ಅರವಿಂದನೇನೋ ಒಳ್ಳೆಯ ಹುಡುಗ. ರೂಪವಂತ. ಆದರೆ ಶೀಲಾಳಿಗೆ ತಕ್ಕವನೆಂದು ತನಗೆ ಅನಿಸಿರಲಿಲ್ಲ. ತನ್ನ ಮನಸ್ಸಿನ ವಿರುದ್ಧ ಮಾವನವರು ಈ ಮದುವೆಯನ್ನು ಗೊತ್ತುಮಾಡಿದ್ದರು. ಗಂಡನಿಗೆ

ಒಳ್ಳೆಯ ಕೆಲಸ ಸಿಗುವವರೆಗೆ ಮದುವೆಯನ್ನು ಮುಂದೆ ಹಾಕಲಾಗಿತ್ತು. ಶೀಲಾ ಇನ್ನೂ ತನ್ನ ಮನೆಯಲ್ಲೇ ಇದ್ದಳು.

ಒಳಗಿನ ಕೋಣೆಯಲ್ಲಿ ಮಾಲಾ ಮತ್ತು ಸುಂದರಕ್ಕ ಇಬ್ಬರೂ ಕಿರು ಚುತ್ತಿದ್ದರು.

"ನಾಚಿಗ್ಗೇಡಿ, ಹಳೆ ನಾಚಿಗ್ಗೇಡಿ ಏನಾಗಿತ್ತು ನಿನಗ ಧಾಡಿ ? ಮದುವಿ ಗೊತ್ತಾದಾಕಿ ನಾಲ್ಕ ದಿನಾ ಮನಸ್ಸ ಬಿಗಿ ಹಿಡೀಲಿಕ್ಕೆ ಆಗಲಿಲ್ಲಾಂದರ ಎಂಥಾ ಹೆಣ್ಣ ನೀನು. ಅರವಿಂದಗ ಏನ ಹೇಳತಿ? ಮೋಸಾ ಮಾಡಿ ಲಗ್ನಾ ಮಾಡಿಕೋತೀಯೇನ?'" ಮಾಲಾ ಪೂತ್ಕರಿಸಿದಾಗ ಅತ್ತೆ ಉತ್ತರಿಸಿದಳು.

"ಛೇ ಛೇ, ಅರವಿಂದ ಸಂಭಾವಿತ. ಇಂಥಾ ಹರೇಮಿನ ಲಗ್ನಾ ಮಾಡಿದರ ಬುಟ್ಟ್ಯಾಗಿಟ್ಟು ಮಾರಿಕೊಂಡು ಬಂದಾಳು. ಅವನಿಗೇನು, ಮನೀ ಬಾಗಿಲ ದಾಗ ಹುಡುಗೇರ ಕ್ಯೂ ನಿಂತಾರ. ಈ ಲಗ್ನಾನಃ ಬ್ಯಾಡಾ ಅಂತ ಹೇಳ್ತೇನಿ" ಶೀಲಾನ ಉಸಿರೇ ಕೇಳುತ್ತಿರಲಿಲ್ಲ.

ಮೋಹನನ ಮೈ ಕಂಪಿಸುತ್ತಿತ್ತು. ಅವಳನ್ನು ಅನುಭವಿಸಿ ಸುಖಪಟ್ಟ ವನು ತಾನು, ತಪ್ಪೆಲ್ಲ ಅವಳೊಬ್ಬಳದೇ ಹೇಗಾದೀತು ? ಇವರು ಮಾತಾಡು ವದೇ ತಪ್ಪು. ಅರಿಯದ ಹುಡುಗಿಯನ್ನು ಪ್ರೀತಿಯ ಮಾತುಗಳಿಂದ ಮೋಹಿಸಿ ಅವಳು ಮನಸ್ಸಿನ ಹತೋಟಿ ಕಳೆದುಕೊಳ್ಳುವಂತೆ ಮಾಡಿದ್ದು ತನ್ನ ತಪ್ಪ ಲ್ಲವೇ? ಅವಳಾಗಿಯೇ ತನ್ನ ಮೇಲೆ ಬಂದು ಬೀಳಲಿಲ್ಲ! ಈ ಸಂಚಿನಲ್ಲಿ ತನ ಅಪರಾಧವೇ ಹೆಚ್ಚಿನದು. ಅವಳೊಬ್ಬಳೇ ಯಾಕೆ ಅನ್ನಿಸಿಕೊಳ್ಳಬೇಕು. ತನ್ನನ್ನೂ ಬಯ್ಯಲಿ, ಇದೇ ರೀತಿ ಅಪ್ಪ, ಅವ್ವ,ಅಕ್ಕ,ಅತ್ತೆ, ಮಾವ ಎಲ್ಲರೂ ಬಯ್ದರೆ ಅವಳೊಬ್ಬಳೇ ಹೇಗೆ ಎದುರಿಸಿಯಾಳು ? ಮಾಲಾ ಈ ಮಾತನ್ನು ನುಂಗಿ ಸುಮ್ಮನಿದ್ದು ಬಿಟ್ಟಿದ್ದರೆ ಬೊಬ್ಬಾಟವಾಗುತ್ತಿದ್ದಿಲ್ಲ. ನಾಳೆ ನಮ್ಮ ಮನೆಯ ಕಥೆ ಬೀದಿಗೂ ಬೀಳುವದೇ. ಅವಳೊಡನೆ ತಾನೂ ಜೊತೆಗಿದ್ದರೆ ಈ ಅಪಮಾನ. ನೋವು ಬಯ್ಗಳ ಸಹಿಸಲಿಕ್ಕೆ ಶೀಲಾಳಿಗೆ ಸಾಧ್ಯವಾದೀತು. ಛೇ ಛೇ ಇದೇನು ಮಾಡಿಬಿಟ್ಟೆ ನಾನು. ಅವಳನ್ನು ಅಪ್ಪಿಕೊಂಡ ಆ ಕ್ಷಣದಲ್ಲಿ ಎಲ್ಲವೂ ಮರೆತು ಹೋಗಿ ಮನಸ್ಸಿಗೆ ಮೋಹ ಕವಿಯಿತಲ್ಲ. ಆ ಕಣ್ಣು, ತುಟಿ,

ಗಲ್ಲ, ಮೈಮಾಟ ಎಲ್ಲ ಹುಚ್ಚು ಹಿಡಿಸಿಬಿಟ್ಟವಲ್ಲ ! ಹೆಂಡತಿಯ ಸಹವಾಸ ವಿಲ್ಲದೆ ಮೂರ್ನಾಲ್ಕು ತಿಂಗಳುಗಳೇ ಕಳೆದಿದ್ದವು. ತನ್ನ ಬಯಕೆಗೆ ಈ ಅಮಾಯಕ ಹುಡುಗಿ ಬಲಿಯಾದಳಲ್ಲ. ತನ್ನಿಂದಾಗಿ ಅವಳ ಜೀವನ ಹಾಳಾಗಬಾರದು. ಅರವಿಂದನೊಡನೆ ಅವಳ ಮದುವೆ ನಿಂತುಹೋದರೆ ? ... ? ಅರೆ. ಇದೇನು ತನ್ನ ಮನಸ್ಸು ಇದನ್ನೇ ಅಪೇಕ್ಷಿಸುತ್ತಿತ್ತು ಎನ್ನುವಷ್ಟು ನಿಶ್ಚಿಂತವಾಗಿದೆಯಲ್ಲ. ಒಂದು ಸಲ ನಿಶ್ಚಯವಾದ ಮದುವೆ ಮುರಿದು ಹೋದರೆ ಹುಡುಗಿಗೆ ಅದೇ ಒಂದು ಕಳಂಕ. ಇನ್ನು ಶೀಲಾಳಿಗೆ ಬೇಗ ಗಂಡು ಸಿಗುವುದು ಕನಸಿನ ಮಾತೇ ಸರಿ. ಒಂದು ಗಂಡಿನ ತಪ್ಪಿಗೆ ಅವಳು ಜೀವನ ಪೂರ್ತಿ ಕುಮಾರಿಯಾಗಿರಬೇಕೆ ? ಉಹುಂ, ಇಲ್ಲ. ಅವಳೊಬ್ಬಳನ್ನೇ ಬಿಡುವುದಿಲ್ಲ. ಅವಳಲ್ಲಿ ಸಮಾಜವನ್ನು ಎದುರಿಸುವಷ್ಟು ಬಲವಿಲ್ಲ. ತಪ್ಪು ತನ್ನದೂ ಆಗಿರುವಾಗ ತಾನೇ ಏಕೆ ಅವಳನ್ನು ಮದುವೆಯಾಗಬಾರದು. ತಂದೆಗೆ ತಾನೊಬ್ಬನೇ ಮಗ. ಉಂಡು—ಉಡಲು ಸಾಕಷ್ಟು ಆಸ್ತಿಯೂ ಇದೆ. ಜೊತೆಗೆ ನೌಕರಿಯೂ ಇದೆ. ಮಾಲಾ–ಶೀಲಾ ಅಕ್ಕ–ತಂಗಿಯರು. ಕೆಲವು ದಿನ ಮಾಲಾ ಸಿಡಿ ಸಿಡಿ ಮಾಡಿದರೂ ಎರಡು ಮಕ್ಕಳ ತಾಯಿ. ಪರಿಸ್ಥಿತಿಗೆ ತಾನೇ ಹೊಂದಿಕೊಳ್ಳುತ್ತಾಳೆ. ಅವಳು ಇನ್ನೂ ಹಟ ಮಾಡಿದರೆ ಶೀಲಾಳೊಡನೆ ನಾನು ಬೇರೆ ಮನೆ ಮಾಡುತ್ತೇನೆ ಎಂದರಾಯಿತು; ತಾನೇ ಮೆತ್ತಗಾಗುತ್ತಾಳೆ. ಸರಿ. ಈಗಲೇ ಹೇಳಿಬಿಡಬೇಕು.

ದೃಢವಾದ ಹೆಜ್ಜೆಗಳನ್ನಿಡುತ್ತ ಮೋಹನ ಮಾಲಾನ ಕೋಣೆಗೆ ಬಂದ. ಮಾತಿನ ದಭದಭೆ ಒಮ್ಮೆಲೆ ಶಾಂತವಾಯಿತು. ಶೀಲಾನ ಹತ್ತಿರ ಹೋಗಿ ಅವಳ ಹೆಗಲ ಮೇಲೆ ಕೈಯಿಟ್ಟು "ಬಾ ಶೀಲಾ, ನಿನಗ ಹಸಿವಿ ಆಗಿರಬೇಕು. ಒಳಗ ಹೋಗಿ ತಿಂಡಿ ತಿನ್ನು. ಮಾಲಾ, ಶೀಲಾನ್ನ ಅರವಿಂದ ಬಿಟ್ಟರ ನಾನs ಆಕೀನ್ನ ರಿಜಿಸ್ಟರ್ಡ ಮದಿವೀ ಮಾಡಿಕೋತೀನಿ. ಇದು ಪ್ರಮಾಣ. ನಾನು ಈ ಮನೀ ಯಜಮಾನ ಅನ್ನೂದು ನೆನಪ ಇಟ್ಟುಕೋ. ನೀನು ಬಾಣಂತಿ ತ್ರಾಸ ಮಾಡಿಕೋಬಾರದು. ಪರಿಸ್ಥಿತಿ ತಿಳಕೊಂಡು ಸುಮ್ಮನಿರು." ಇಷ್ಟು ಹೇಳಿ ಶೀಲಾಳ ಕೈ ಹಿಡಿದು ಹೊರಗೆ ಕಳಿಸಿದ.

"ದೇವರು ನನ್ನ ಯಾಕ ಉಳಿಸಿದ್ನೋ. ಹಡಿಯೂಮುಂದ ಸತ್ತಿದ್ದರ ಛೊಲೋ ಇತ್ತು"–ಹಾಡಿ ಹಾಡಿಕೊಂಡು ಅಳುತ್ತಿದ್ದ ಮಾಲಾಳ ದನಿ ಅಡಿಗೆ ಮನೆಯಲ್ಲಿ ಇಬ್ಬರ ಕಿವಿಗಳಿಗೂ ಅಪ್ಪಳಿಸುತ್ತಿತ್ತು. ಹಾಲಿನ ಲೋಟವನ್ನೆತ್ತಿ ಶೀಲಾಳ ತುಟಿಗಿಟ್ಟ ಮೋಹನ. ಒಂದು ಗುಟುಕೂ ನುಂಗಲಾರದಷ್ಟು ಗಂಟಲು ಉಬ್ಬಿತ್ತು. ಆರ್ತಳಾಗಿ ಮೋಹನನತ್ತ ನೋಡಿ ಶೀಲಾ ಬಲವಂತವಾಗಿ ಗಟಗಟ ಹಾಲು ಕುಡಿದು ತನ್ನ ಕೋಣೆಗೆ ಹೋಗಿ ಬಿದ್ದುಕೊಂಡಳು. ಮೋಹನ ಅವಳನ್ನು ಹಿಂಬಾಲಿಸಲಿಲ್ಲ. ಅಳುತ್ತಿದ್ದ ಮಗುವನ್ನೆತ್ತಿಕೊಂಡು ಮೊಲೆ ಕುಡಿಸುತ್ತಿದ್ದ ಹೆಂಡತಿಯನ್ನೊಮ್ಮೆ ಹಣಿಕಿ ನೋಡಿ, ತಲೆಬಾಗಿಲು ತೆರೆದು ತೋಟದಲ್ಲಿ ಹೋಗಿ ನಿಂತು ಹಾಯಾಗಿ ಉಸಿರು ಬಿಟ್ಟ.

* * *

ರಾತ್ರಿ ಎಲ್ಲ ನಿದ್ದೆ ಇಲ್ಲದೆ ಕಣ್ಣು ಕೆಂಡವಾಗಿದ್ದರೂ ಬೆಳಿಗ್ಗೆ ಬೇಗ ಎದ್ದು ಶೀಲಾ ಕಾಫಿ ಮಾಡಿಕೊಂಡು ಅಕ್ಕನ ರೂಮಿನಲ್ಲಿ ಕಾಲಿಟ್ಟಾಗ ಮಾಲಾ ಅವಳತ್ತ ದುರುದುರು ನೋಡಿ ಕೆಳಗೆ ಮಲಗಿದ್ದ ಅತ್ತೆಗೆ "ಸುಂದ್ರತ್ತೀ,ಆಕೀಗೆ ನನ್ನ ಕೋಣ್ಯಾಗ ಬರಬ್ಯಾಡಾ ಅನ್ನು, ಆಕೀ ಕೈಯಾಗಿಂದ ತಿಂದರ ನನಗ ವಿಷ ತಿಂದ್ಹಾಂಗ. ಹಾವಿಗೆ ಹಾಲ ಎರದಾಂಗ ಅತು, ಇಷ್ಟ ದಿನಾ ಸಾಕಿದ್ದಕ್ಕೂ ಉಪಕಾರಾ ಮಾಡಿದ್ಲು" ಎಂದು ಚೀರಿದಳು. ಇನ್ನೊಂದು ಕ್ಷಣ ಅಲ್ಲಿ ನಿಲ್ಲದೆ ಶೀಲಾ ಬಾಯಿಗೆ ಸೆರಗು ತುರುಕಿ ಹೊರಗೆ ಓಡಿದಳು.

ಮೋಹನ ಹೆಂಡತಿಯ ಕೋಣೆಯ ಬಾಗಿಲಲ್ಲೇ ನಿಂತು ಕೇಳಿದ.

"ಕೂಸಿನ್ನ ತೊಟ್ಲಾಗ ಹಾಕೂದು ಎಂದು ಅನ್ನೂದು ಹೇಳಿದರ ಊರಿಗೆ ಪತ್ರಾ ಬರಿತೀನಿ." ಮಾಲಾನಿಂದ ಉತ್ತರ ಬರಲಿಲ್ಲ. ಎಂಟ್ಹತ್ತು ದಿನಗಳಿಂದ ನಡೆದ ಹೆಂಡತಿಯ ಮೌನ ಸತ್ಯಾಗ್ರಹಕ್ಕೆ ಮೋಹನ ಮೆತ್ತಗಾಗಿ ಹೋಗಿದ್ದ. ಈ ಸಮಸ್ಯೆಯನ್ನು ಬಗೆಹರಿಸುವದು ತಾನು ತಿಳಿದಷ್ಟು ಸುಲಭವಲ್ಲವೆಂದು ಈಗೀಗ ಅವನಿಗೂ ತಿಳಿಯತೊಡಗಿತ್ತು. ಶೀಲಾಳ ಸೋತಮುಖ, ಮಾಲಾಳ ಸಿಟ್ಟಿನ ಮುಖ. ಎರಡರ ನಡುವೆ ತಾನು ಎತ್ತ ಹೋಗಬೇಕೆಂದು ತಿಳಿಯದೆ ದಿಕ್ಕುಗಾಣದಾಗಿದ್ದ.

ಮೋಹನನ ಪತ್ರ ನೋಡಿ ಅಪ್ಪ–ಅವ್ವ, ಅತ್ತೆ–ಮಾವಂದಿರು ಹೊಸ ಕೂಸು ನೋಡಲು ಸಂಭ್ರಮದಿಂದ ಬಂದಿಳಿದರು. ಮಾಲಾ ಹಿರಿಯರಿಗೆ ನಡೆದ ಸಂಗತಿಯನ್ನೆಲ್ಲ ವರ್ಣಿಸಿ ಹೇಳಿ ಗೋಳೋ ಎಂದಳು. ಮುಸು ಮುಸು ಅಳುತ್ತ ಮುಖ ಮುಚ್ಚಿ ಕುಳಿತ ಶೀಲಾಳನ್ನು ಅವಳ ಅಪ್ಪ–ಅವ್ವ ಬಯ್ಗುಳದಿಂದ ನರಕ ದರ್ಶನ ಮಾಡಿಸಿದರು. ಎಲ್ಲರೂ ತಪ್ಪೆಲ್ಲ ತನ್ನದೇ ಎನ್ನುವಂತೆ ಮಾತಾಡುತ್ತಾರಲ್ಲ ಎಂದು ಶೀಲಾ ಒಳಗೊಳಗೇ ಸಿಡಿಮಿಡಿಗೊಂಡಳು. ಹಿರಿಯರ ಎದುರು ಅಪರಾಧಿಭಾವ ಹೊತ್ತು ತಲೆ ತಗ್ಗಿಸಿ ಕುಳಿತ ಮೋಹನ ಮತ್ತೆ ಹೇಳಿದ. "ನೀವೆಲ್ಲಾ ಒಪ್ಪಿದರ ಶೀಲಾನ್ನ ನಾನಃ ಲಗ್ನಾ ಮಾಡಿಕೋತಿನಿ. ಇಬ್ಬರ್ನೂ ಸುಖದಿಂದ ಇಡತೇನಿ."

ಮಾಲಾ ತಾಯಿಯ ಕೊರಳಿಗೆ ಜೋತುಬಿದ್ದು "ಈ ಲಗ್ನಕ್ಕ ನೀವು ಹೂಂ ಅಂದರ ನನ್ನ ಕುತ್ತಿಗೀ ಕೊಯ್ದ್ಹಾಂಗ ಅಂತ ತಿಳಕೋರಿ" ಎಂದು ಅತ್ತಳು.

ಮೋಹನನ ಅಪ್ಪ ಯೋಚಿಸಿ ಹೇಳಿದರು. "ಅರವಿಂದನ ಕೂಡ ಲಗೂನ ಶೀಲಾನ ಲಗ್ನಾ ಗೊತ್ತು ಮಾಡೂನು. ಅಂವಗ ಬರಲಿಕ್ಕೆ ನಾ ಪತ್ರಾ ಬರೀತೀನಿ"

"ಅರವಿಂದ ಬಂದಾಗ ಏನು ನಡೀತು ಎಲ್ಲಾ ನಾ ಅವರಿಗೆ ಹೇಳೀನಿ. ಒಪ್ಪಿದರ ಲಗ್ನಾ ಮಾಡಿಕೊಳ್ಲಿ, ಬ್ಯಾಡಾದರ ಬಿಡಲಿ" ಶೀಲಾ ಮೊಂಡು ಧೈರ್ಯದಿಂದ ಹೇಳಿದಳು.

" ಇಂಥಾ ಸುದ್ದೀ ಕೇಳಿದ ಮ್ಯಾಲೆ ಯಾರು ನಿನ್ನ ಲಗ್ನಾ ಮಾಡಿಕೋತಾರವ್ವ" ಮೋಹನನ ಅವ್ವ ಸಂತಾಪ ಸೂಚಿಸಿದರು.

"ಬ್ಯಾಡಾಂದರ ನಾ ಹಾಗಃ ಇರತೇನಿ. ನೌಕರಿ ಮಾಡಿ ನನ್ನ ಹೊಟ್ಟೀ ನಾ ತುಂಬಿಸಿಕೋತೀನಿ. ಯಾರಿಗೂ ನಾ ಭಾರ ಆಗೂದಿಲ್ಲಾ. ಆದರ ಅರವಿಂದಗ ಮೋಸಾ ಮಾಡಿ ಲಗ್ನಾ ಮಾಡಿಕೊಳ್ಳಲಿಕ್ಕೆ ನನ್ನ ಮನಸ್ಸು ಒಪ್ಪೂದಿಲ್ಲಾ. ನಾನು ಕಡೀತನಕಾ ಅವರ ಜೊತೀಗೆ ಬಾಳಬೇಕು. ನನ್ನ ಕಾನ್ಶಿಯನ್ಸ ಕುಟಕುತ್ತಾ ಇರ್ತದ" ಶೀಲಾ ತನ್ನ ನಿರ್ಧಾರ ಹೇಳಿದಳು.

ಅವಳೆಡೆಗೆ ಕನಿಕರದಿಂದ ನೋಡುತ್ತ ಶೀಲಾನ ಅಪ್ಪ ಹೇಳಿದರು "ಶೀಲಾ, ನೀನು ತಪ್ಪು ಮಾಡಿದಾಗs ನಿನ್ನ ಕಾನ್ಸಿಯನ್ಸ ಸತ್ತು ಹೋತು. ಆಗ ನೀ ಮಾಲಾಗ ಅನ್ಯಾಯ ಮಾಡ್ಲಿಕ್ಕೆ ಹತ್ತೀದಿ ಅನ್ನೊದು ಮರತ ಬಿಟ್ಟಿ" ಬೇರೆ ದಾರಿ ಕಾಣದ ಶೀಲಾ ಮತ್ತೆ ಬಿಕ್ಕಿ ಬಿಕ್ಕಿ ಅತ್ತಳು.

"ನಾ ಜೀವದಿಂದ ಇರೂತನಾ ಇವರ ಜೋಡಿ ನಿನ್ನ ಲಗ್ನ ಆಗಲಿಕ್ಕೆ ಸಾಧ್ಯ ಇಲ್ಲಾ" ಮಾಲಾ ಆಕ್ಕಸದಿಂದ ತಂಗಿಯ ಸೋಟೆಗೆ ತಿವಿದಳು.

"ಇದರೊಳಗೆ ತಪ್ಪು ನಂದೂ ಅದ. ಅದರ ಪ್ರಾಯಶ್ಚಿತ್ತಕ್ಕೆ ನಾ ಶೀಲಾನ್ನ ಲಗ್ನ ಆಗೇ ತೀರತೇನಿ. ಮಾಲಾ ನೀ ಎಷ್ಟ ಜಿದ್ದ ಮಾಡಿದರೂ ನಾ ಲಗ್ನ ಆಗಿ ಬ್ಯಾರೆ ಮನಿ ಮಾಡತೇನಿ" ಮೋಹನ ತನ್ನ ಗಂಡಸುತನ ತೋರಿಸಿದ ಹಿರಿಯರಿದ್ದಾರೆನ್ನುವ ಭರವಸೆಯಿಂದ.

"ಅವ್ವಾs ನಾ ಇಲ್ಲಿ ಇರೂದಿಲ್ಲ. ನನ್ನ ಊರಿಗೆ ಕರಕೊಂಡು ಹೋಗ್ರಿ, ಇಲ್ಲಾ ಒಂದಿಷ್ಟು ವಿಷಾ ಕೊಟ್ಟಬಿಡ್ರಿ" ಎನ್ನುತ್ತ ತಾಯಿಯ ತೆಕ್ಕೆಗೆ ಬಿದ್ದು ಮಾಲಾ ಮನೆಯ ಸೂರು ಹಾರಿ ಹೋಗುವಂತೆ ಅತ್ತಳು. ಹಿರಿಯರು ಮೂಕ ರಾಗಿದ್ದರು, ಸಮಸ್ಯೆ ಇನ್ನಿಷ್ಟು ಜಟಿಲವಾಗುತ್ತ ಹೋಯಿತು.

ದಿನದಿನಕ್ಕೆ ಈ ಅಪಮಾನ, ನೋವು. ದುಃಖವುಂಡೇ ತಾನು ಬಾಳನ್ನು ಸವೆಸಬೇಕೇನೋ ಎಂದು ದಿಗಿಲಾಗಿತ್ತು ಶೀಲಾಳಿಗೆ. ಈ ಸಮಾಜದ ದೃಷ್ಟಿ ಯಲ್ಲಿ ಎಂಥ ದೊಡ್ಡ ತಪ್ಪು ತನ್ನದು! ಇದರಲ್ಲಿ ಗಂಡಸಿನ ಪಾಲು ಏನೂ ಇಲ್ಲವೇ? ಕಾಮ ಹೆಣ್ಣಿನ ಶತ್ರು! ಕಾಮದಿಂದ ಗಂಡಸಿಗೆ ಸುಖವಾದರೆ ಹೆಂಗ ಸಿಗೆ ಹೆಚ್ಚಿನ ಭಾಗ ದುಃಖವೇ. ಐದು ನಿಮಿಷದ ಸುಖಕ್ಕೆ ಬಲಿಯಾದರೆ ಜೀವವಿರುವವರೆಗೂ ದುಃಖಿಸಬೇಕು. ದೇವರು ಇಂಥ ಬಯಕೆಯನ್ನೆ ಹೆಣ್ಣಿಗೆ ಕೊಡಬಾರದಿತ್ತು. ಕೊಟ್ಟು ಮತ್ತೆ ಮೇಲೆ ಹೆಜ್ಜೆ ಹೆಜ್ಜೆಗೆ ಈ ರೀತಿ, ಸಂಕಟ, ಅಪಮಾನ, ದುಃಖ ಕೊಡುವ ದೇವರೆ ಹೆಣ್ಣಿನ ಶತ್ರು. ಹೆಣ್ಣಿನ ದುಃಖದಿಂದ ದೇವರು ಮೋಜು ನೋಡುವನೇ? ನಿಜಕ್ಕೂ ತನ್ನ ಪಾಲಿಗಂತೂ ದೇವರಿಲ್ಲ. ತನಗೆ ಯಾರೂ ಇಲ್ಲ, ಏಕಾಂಗಿ—ವಿಚಾರ ಮಾಡಿ ಮಾಡಿ ತಲೆಕಾಯ್ದು ಹೊಟ್ಟೆ ಯಲ್ಲಿ ಕೂಳಿಲ್ಲದೆ, ನಿದ್ದೆಯಿಲ್ಲದೆ ಅತ್ತಿತ್ತ ಹೊರಳುತ್ತಿದ್ದ ಶೀಲಾಳ ದೇಹ

ಒಮ್ಮೆಲೆ ಕಂಪಿಸಿತು. ಯಾವ ಮಾಯೆಯಿಂದಲೊ ಮೋಹನ ಬಂದು ಅವಳನ್ನು ಅಪ್ಪಿಕೊಂಡಿದ್ದ. ಅವನು ಮುದ್ದಿಡಲು ಮುಂದುವರಿಯುವಷ್ಟರಲ್ಲಿ ತನ್ನ ಕಸುವನ್ನೆಲ್ಲ ಹಾಕಿ ಅವನನ್ನು ನೂಕಿ ಶೀಲಾ, ಎದ್ದು ನಿಂತಳು.

"ಯಾಕ ಶೀಲಾ, ಹೆದರಬ್ಯಾಡಾ. ನಾನು ಮೋಹನ. ನಿನ್ನ ಮುಖಾ ಸಪ್ಪಗಾಗಿತ್ತು, ಅಳ್ತಿಯೇನೋ ಅಂತ ರಮಿಸಲಿಕ್ಕೆ ಬಂದೆ."

"ಹೌದು, ನೀವು ರಮಿಸಲಿಕ್ಕೆ ಬಂದೀರಿ. ಆದರ ಈಗ ನನಗ ನಿಮ್ಮ ಪ್ರೀತಿ ಬ್ಯಾಡಾ. ನೀವು ಹೊರಗ ಹೋಗ್ರಿ. ಏಳ್ರಿ ಇಲ್ಲಿಂದ ಹೋಗ್ರಿ"

"ಸಿಟ್ಟಾಗಬ್ಯಾಡಾ ಶೀಲಾ, ನಾ ನೋಟೀಸ ಕೊಟ್ಟೇನಿ. ನಿನ್ನ ರಜಿಸ್ಟರ್ಡ ಲಗ್ನಾ ಮಾಡಿಕೋತೀನಿ. ನನ್ನ ನಂಬು. ಯಾರು ಏನಂದ್ರೂ ನಾ ಕೇಳಾಂವ ಅಲ್ಲಾ. ನಾ ನಿನ್ನ ಭಾಳ ಪ್ರೀತಿ ಮಾಡ್ತೇನಿ."

"ಹೌದು, ನೀವು ಭಾಳ ಭಾಳ ಪ್ರೀತಿ ಮಾಡೇ ಈ ಗತೀಗೆ ನನ್ನ ತಂದಿರಿ. ಎರಡು ಮಕ್ಕಳು ಮತ್ತು ಅಕ್ಕನ ಜವಾಬ್ದಾರಿನೂ ನಿಮ್ಮ ಮ್ಯಾಲೆ ಅದ."

"ನಾ ಹೇಳಿದಾಂಗ ಕೇಳಿಕೊಂಡ ಬಿದ್ದಿರ್ಲಿ ಆಕಿ. ಇಲ್ಲಾಂದರ ಒದ್ದ ಹೊರಗೆ ಹಾಕತೇನಿ. ನನ್ನ ಮಾತ ಕೇಳಲಾರದ ಮಾಲಾ ನನಗೆ ಬೇಕಾಗಿಲ್ಲ."

"ಮಾಮಾ, ನೀವು ಅಕ್ಕನ ಕೂಡ ಪ್ರಿತಿ ಮಾತು ಆಡಿದ್ದು ನಾನೂ ಕಿವೀಲೆ ಕೇಳೀನಿ. ಈಗ ಅಕೀನ್ನ ಒದೀತೀನಿ ಅಂತೀರಿ. ನಾಳೆ ಇನ್ನೊಬ್ಬಾಕಿ ನಿಮ್ಮ ಕೈಗೆ ಸಿಕ್ಕಾಗ ನನ್ನೂ ಹಿಂಗs ಒದಿಯೂವವರ ಅಲ್ಲಾ."

"ಛೇ ಛೇ ನೀ ತಪು ತಿಳಕೋಬ್ಯಾಡ ಶೀಲಾ. ಆಕೀ ಹಟಮಾರಿತನಕ್ಕ ಸಿಟ್ಟು ಬಂದು ಹಾಂಗ ಅಂದೆ. ನನಗ ಇಬ್ಬರೂ ಬೇಕು. ಇಬ್ಬರ್ನೂ ಸಾಕತೀನಿ ಆತಿಲ್ಲೊ. ಬಾ ಇಲ್ಲೇ."

"ನೀವು ಇಲ್ಲಿಂದ ಎದ್ದ ಹೊರಗೆ ಹೋಗ್ರಿ. ಇನ್ನೊಮ್ಮೆ ಇಲ್ಲೆ ಕಾಲು ಇಡಬ್ಯಾಡ್ರಿ. ಹೋಗ್ರಿ ಈಗ ಹೊರಗೆ" ಮೋಹನನನ್ನು ದಬ್ಬಿದ ಶೀಲಾ ಧಡ ಧಡಿಸುವ ಎದೆಯನ್ನು ಹಿಡಿದುಕೊಂಡು ಹಾಸಿಗೆಯ ಮೇಲೆ ಉರುಳಿದಳು.

ರಾತ್ರಿಯ ನಿಶ್ಯಬ್ದ ವಾತಾವರಣದಲ್ಲಿ ಈ ಸಂಭಾಷಣೆ ಎಲ್ಲರ ಕಿವಿಗಳಿಗೂ ತಟ್ಟಿತ್ತು.

* * *

ಮುಂದೆ ಎಂಟು ದಿನಗಳಲ್ಲಿಯೆ ಶೀಲಾ ತನ್ನದೇ ಸ್ವಂತ ಮನೆಯಿಂದ ಅವ್ವನಿಗೆ ಪತ್ರ ಬರೆದಳು.

ಅವ್ವನಿಗೆ,

ನನ್ನ ಗಳತಿಯೊಬ್ಬಳ ಸಹಾಯದಿಂದ ಅಕ್ಕನ ಮನೆಯಿಂದ ಹೊರಬಿದ್ದು ಇಲ್ಲಿಗೆ ಬಂದಿದ್ದೇನೆ. ನಾನು ಮಾಡಿದ ತಪ್ಪಿನಿಂದಾಗಿ ಅವಳ ಜೀವನ ಹಾಳಾಗಬಾರದೆಂದು ನನ್ನ ಉದ್ದೇಶ. ಅರವಿಂದನಿಗೆ ವಿಷಯ ತಿಳಿಸದೆ ಅಪ್ಪ ಮದುವೆ ಗೊತ್ತು ಮಾಡಿದರೆ ಅದನ್ನು ಖಂಡಿತ ಮುರಿಯುತ್ತೇನೆ. ನನ್ನದೇ ಸಂಬಳವಿರುವದರಿಂದ ನಾನು ನಿಮಗೂ ಭಾರವಾಗಲು ಬಯಸುವದಿಲ್ಲ. ಮಗಳ ಮನೆಗೆ ಬರಬೇಕು ಎನ್ನಿಸಿದರೆ ನೀವು ಸಂತೋಷದಿಂದ ಬರಬಹುದು. ಸಮಾಜ, ಮಕ್ಕಳು, ಸೊಸೆಯಂದಿರ ಮುಂದೆ ಅಪಮಾನವೆನಿಸುತ್ತಿದ್ದರೆ ನಾನು ನಿಮ್ಮ ಪಾಲಿಗೆ ಇಲ್ಲವೆಂದೇ ತಿಳಿಯಿರಿ.

ನಿಮ್ಮ

ಶೀಲಾ

ಅಪ್ಪ ಸಿಟ್ಟಾದರೂ ಅವ್ವ ಜೀವ ತಡೆಯದೆ ಬಂದೆಬಿಟ್ಟಳು. ಮಗಳ ಎರಡು ಕೋಣೆಯ ಮನೆಯನ್ನು ಸಜ್ಜು ಮಾಡಲು ನೆರವಾದಳು. ಅವಳ ಒಂಟಿ ಬಾಳನ್ನು ನೆನೆದು ಕೊರಳು ತಟ್ಟಿ ಗುಟ್ಟಿನಲ್ಲಿ ಅತ್ತಳು. ದನಿಯೇರಿಸಿದರೆ ಚಾಳಿನವರಿಗೆ ಕಾರಣ ಹೇಳಬೇಕಲ್ಲ. ನೌಕರಿ ಮಾಡುತ್ತಾಳೆ, ಮದುವೆ ಮುಂದೆ ಹಾಕುತ್ತಿದ್ದಾಳೆಂದು ಹೆಂಗಳೆಯರಲ್ಲಿ ಸುದ್ದೀ ಹರಡಿದಳು. ಕಲ್ಯಾಣ ಕಟ್ಟುವ ಜನ ಆವರ, ಈ ವರ ಎಂದು ಅವ್ವನಿಗೆ ವರದಿ ಒಪ್ಪಿಸಿದರು. ಈಗಲೇ ಬೇಡ, ಚಿಕ್ಕವಳು, ಕೆಲವು ದಿನ ಕಳೆಯಲಿ ಎಂದು ಅವ್ವನೇ ಅವರಿಗೆ ಸಮಾಧಾನ ಹೇಳಿ ಅಪ್ಪನ ಸಿಟ್ಟು ಇಳಿಸಲು ತಿರುಗಿ ಊರಿಗೆ ಹೋದಳು.

ಕೆಲಸಕ್ಕೆ ಹೋಗುವ ಹುಡುಗಿ, ಒಬ್ಬಂಟಿ, ಎಂದು ಎಲ್ಲರೂ ಶೀಲಳಿಗೆ ಸಹಾಯ ಮಾಡಲು ಸಿದ್ಧರು. ಆಫೀಸು, ಒಬ್ಬಳ ಅಡಿಗೆ, ಅಕ್ಕ-ಪಕ್ಕದವರೊಡನೆ ಹರಟೆ, ಪೇಟೆ, ಸಿನಿಮಾಗಳಲ್ಲಿ ದಿನ, ತಿಂಗಳು, ವರ್ಷಗಳು ಉರುಳಿದವು. ತನ್ನ ಜೀವನವಲ್ಲಿಯ ದುರಂತದ ಸುಳಿವು ಒಬ್ಬರಿಗೂ ಬಿಟ್ಟುಕೊಡದಂತೆ ನೀತಿ- ನಯಗಳನ್ನು ಬೆಳೆಸಿಕೊಂಡ ಶೀಲಾಳಿಗೆ ತನ್ನವರನ್ನೆಲ್ಲ ಬಿಟ್ಟು ಬಂದರೂ ಇಲ್ಲಿ ಮಾನಸಿಕ ಶಾಂತಿ ಸಿಕ್ಕಿತ್ತು. ಬಹಳ ದಿನಗಳ ಹಿಂದೆ ಮಾಮಾ ಒಮ್ಮೆ ಆಫೀಸಿಗೇ ತನ್ನನ್ನು ಹುಡುಕಿಕೊಂಡು ಬಂದಾಗ ಇನ್ನೊಮ್ಮೆ ತನ್ನನ್ನು ಬೆಟ್ಟಿಯಾದರೆ ಆತ್ಮಹತ್ಯೆ ಮಾಡಿಕೊಳ್ಳುತ್ತೇನೆಂದು ಅವನನ್ನು ಹೆದರಿಸಿದ್ದಳು. ಮಾಮಾ ಬೇರೆ ಊರಿಗೆ ವರ್ಗ ಮಾಡಿಸಿಕೊಂಡು ಹೋದ ಸುದ್ದಿ ತಿಳಿದು ಹಾಯಾಗಿದ್ದಳು.

ತನ್ನ ಬಸವಳಿದ ಮುಖ ನೋಡಿ ಕಮಲಕ್ಕ "ಸುಮ್ಮನ ಕೈ ಬಾಯಿ ಸುಟಕೋತ, ಕಚೇರ್‍ಯಾಗ ದುಡಕೋತ ಯಾಕ ಬತ್ತಲಿಕ್ಕೆ ಹತ್ತೀದಿ ? ಶೀಲಾ ಮದುವೀ ಮಾಡಿಕೋ. ಆಗೂ ವಯಸ್ಸಿನ್ಯಾಗ ಎಲ್ಲಾ ಆದರ ಛಂದ" ಎಂದು ಪ್ರೀತಿಯಿಂದ ದುಂಬಾಲು ಬೀಳುತ್ತಿದ್ದರು.

"ಯಾವದಕ್ಕೂ ಕಾಲ ಕೂಡಿ ಬರಬೇಕಲ್ರೀ" ಎಂದು ಶೀಲಾ ಹಾರಿಕೆಯ ಉತ್ತರ ನೀಡಿ ನಕ್ಕು ಬಿಡುತ್ತಿದ್ದಳು.

ಹಗಲು ಹೇಗೋ ಕಳೆದರೂ ರಾತ್ರಿ ಮುಸುಕಿನಲ್ಲಿ ನಿದ್ದೆಯಲ್ಲಿ ತನ್ನ ಸುಖ-ಸಂಸಾರದ ಕನಸುಗಳನ್ನು ಕಂಡು ಪುಲಕಿತಳಾಗುತ್ತಿದ್ದಳು. ಎದ್ದಾಗ ಅವಳ ಬಾಳಸಂಗಾತಿ, ಮುದ್ದು ಮಕ್ಕಳುಮಾಯವಾಗುತ್ತಿದ್ದರು. ಜಡವಾದ ಮೈ ಮನಸ್ಸು ಹೊತ್ತು ಯಾಂತ್ರಿಕವಾಗಿ ಕೆಲಸದ ನೊಗಕ್ಕೆ ಹೆಗಲು ಕೊಡುತ್ತಿದ್ದಳು. ನಡುವೆ ಒಮ್ಮೆ ಅವ್ವ ಬಂದಾಗ ಅರವಿಂದನ ಮದುವೆಯಾದ ವಿಷಯ ಹೇಳಿದಳು. ಅಪ್ಪ ತೀರಿದ ಮೇಲೆ ಅವ್ವ ಬಂದು ಶೀಲಳ ಜೊತೆಯಾದಳು. ಒಂದು ಅಂತಃಕರಣದ ಜೀವ ತನ್ನ ಹತ್ತಿರ ಇದೆಯೆಂದು ಆ ವಳಿಗಷ್ಟೇ ಸಮಾಧಾನ.

ಮನಸ್ಸು ಎಷ್ಟು ಕಲ್ಲು ಮಾಡಿಕೊಂಡರೂ ತನ್ನದೂ ಉಪ್ಪು, ಹುಳಿ, ಖಾರ ತಿನ್ನುವ ಜೀವ ತಾನೇ! ತಾನು ಗಂಡಿನೊಡನೆ ಪಡೆದ ಮೊದಲ ಅನುಭವ ಅವಳಿಗೆ ಬೇಡವೆನ್ನಿಸುವದಿಲ್ಲ. ನಿಷ್ಕಳಂಕ ಮುಖ, ಆರ್ಥಿಕ ಸ್ವಾತಂತ್ರ್ಯ

ತುಂಬಿದ ಯೌವನ–ಒಂದೊಂದೂ ಯುವಕರನ್ನು ತನ್ನ ಹತ್ತಿರ ಎಳೆಯುತ್ತಿದ್ದರೂ ಸಾಧ್ಯವಿದ್ದಷ್ಟು ಅವರನ್ನು ದೂರವಿಡಲು ಪ್ರಯತ್ನ ಮಾಡುತ್ತಲೇ ಬಂದಿದ್ದಳು. ಈಗೀಗ ಇಂಥ ಹೋರಾಟದಿಂದ ತಾನು ತಪ್ಪು ಮಾಡುತ್ತಿರುವೆನೇ ಎಂದು ಯೋಚಿಸುತ್ತಿದ್ದಳು. ಕುಳಿತಾಗ, ನಿಂತಾಗಲೆಲ್ಲ ಈ ಯೋಚನೆ ಅವಳನ್ನು ಕಾಡುತ್ತಿತ್ತು. ಅದರ ಪರಿಣಾಮ ದೇಹವ ಮೇಲೂ ಆಗುತ್ತಿರುವಂತೆ ಅಲ್ಲೊಂದು ಇಲ್ಲೊಂದು ಬೆಳ್ಳಿ ಕೂದಲು ಮಿನುಗುತ್ತಿದ್ದವು. ಸಮಯ ಹೀಗೆಯೇ ಜಾರಿ ಹೋಗುವದೇ ಎಂದು ಚಿಂತಿಸುತ್ತಿದ್ದಳು.

ಸಣ್ಣದಾಗಿ ಸಿಳ್ಳು ಕೇಳಿಸಿತು. ತಟ್ಟನೆ ಬಾಗಿಲತ್ತ ತಿರುಗಿದಳು. "ಅಂ, ಅಭಯ, ಬರ್ರಿ ಯಾವಾಗ ಬಂದ್ರಿ?"

"ನಾ ಬಂದ ನಿಂತ ಎಷ್ಟೊತ್ತಾತು; ಲಕ್ಷ್ಯ ಎಲ್ಲ್ಯದ ನಿಮ್ದು? ಯಾವ ಕನಸಿನ ಲೋಕದಾಗ ಇದ್ದಿರೋ ನಾ ಪಿಶಾಚಿ ಹಾಂಗ ನುಗ್ಗಿದೆ. ಮನೀಗೆ ಕೀಲಿ ಹಾಕಿತ್ತು, ಅಕ್ಕ ಎಲ್ಲಿ ಹೋಗ್ಯಾಳ ನಿಮಗ ಗೊತ್ತದ ಏನು ಅಂತ ಕೇಳಾಕ ಬಂದಿದ್ದೆ."

"ಹಾಂ, ಹೌದು. ಸಂಜೀ ಮುಂದ ಸಿನಿಮಾಕ್ಕ ಹೋಗ್ತೀವಿ ಅಂತ ತೃಪ್ತಿ ಕುಣೀತಿದ್ಧಳು. ಆದರೆ ದೇವಕಿ ಕೀಲಿಕೈ ನಮ್ಮಲ್ಲೆ ಕೊಟ್ಟಿಲ್ಲಾ. ನೀವು ಬರೋದು ಅವರಿಗೆ ಗೊತ್ತ ಇದ್ದಿಲ್ಲೇನು?"

"ಇಲ್ಲಾ, ಪತ್ರಾ ಬರಿಯಾಕ ಟಾಯಿಮ್ ಇದ್ದಿದ್ದಿಲ್ಲಾ, ಯಥಾ ಪ್ರಕಾರ ಇಂಟರವ್ಯೂಕ್ಕ ಬುಲಾವ್ ಬಂತು. ಹಸಿಬೀ ಹೊತಗೊಂಡು ಹಾಜರ್ ಆದೆ" ಏರ್ ಬ್ಯಾಗ್ ತೋರಿಸಿ ವಿಷಾದದ ನಗೆ ನಕ್ಕ ಅಭಯ.

"ಬರ್ರಿ ಒಳಗ ಕೂಡ್ರಿ, ಚಹಾ ಮಾಡ್ತೀನಿ. ಅವ್ವ ಇಲ್ಲೇ ಗುಡೀಗೆ ಹೋಗ್ಯಾಳ. ಅನಕಾ ಆ ಪೇಪರ ನೋಡ್ರಿ."

"ಛೇ ಛೇ ಚಹಾ ಈಗೇನ ಬ್ಯಾಡ್ರಿ. ಬಸ್ ಸ್ಟ್ಯಾಂಡಿನ್ಯಾಗ ಕುಡದಬಂದೆ. ಮಾತಾಡೂಣಂತ ಇಲ್ಲೆ ಕೂಡ್ರಿ. ಪೇಪರ ಅಂತೂ ಎ ಟು ಝಡ್ ಎಲ್ಲಾ ಓದಿ ಮುಗಿಸೇನಿ. ಬ್ಯಾರೆ ಏನ ಕೆಲಸದ ಹೇಳ್ರಿ ನಮ್ಮಂಥಾ ನಿರುದ್ಯೋಗಿ

ಗಳಿಗೆ. ಡಿಗ್ರಿ ತೊಗೊಂಡು ಐದ ವರ್ಷ ಆದ್ವು, ಕೂಳು ಕತ್ತರಿಸೋದು, ಕತ್ರೀ ಹಾಂಗ ತಿರಗೋದು ಎರಡಃ ಕೆಲಸಾ."

"ಇರಲಿ ಬಿಡ್ರಿ ಅಷ್ಟ್ಯಾಕ ನಿರಾಶ ಆಗ್ತೀರಿ. ಇವತ್ತಿಲ್ಲಾ ನಾಳೆ ಕೆಲಸ ಸಿಕ್ಕೀತು."

"ನೀವಃ ಲಕ್ಕೀ ಆದೀರಿ ಶೀಲಾ. ನೌಕರಿ ಅದ. ಖರ್ಚು ಮಾಡಲಿಕ್ಕೆ ಸ್ವತಂತ್ರ ಇದ್ದೀರಿ. ನಾವು ಸಿಗರೇಟು, ಶೇವಿಂಗ್‌ಗೆ ಸುದ್ದಾ ಇನ್ನೊಬ್ಬರಿಗೆ ಕೈ ಒಡ್ಡಬೇಕು. ಮದುವಿ, ಮನೀ, ಮಕ್ಕಳು ಏನೂ ಕಾಣದ ನಮ್ಮ ಆಯುಷ್ಯ ಮುಗದ ಹೋದರೂ ಹೋಗಬಹುದು."

"ಚ್ಚು ಚ್ಚು ಯಾಕ್ರೀ ಅಭಯ, ಇವತ್ಯಾಕ ಹಿಂಗ ಮಾತಾಡತೀರಿ? ನಾಳಿನ ಇಂಟರವ್ಯೂದ ತಯಾರಿ ಏನಾದರೂ ಮಾಡಿಕೊಳ್ರಿ. ನಾಳಿನ ಕೆಲಸ ನಿಮಗ ಸಿಕ್ಕರೂ ಸಿಗಬಹುದು."

"ನಾಳಿನ ಕೆಲಸ ಸಿಕ್ಕರ ಮೊದಲ ನಿಮ್ಮ ಬಾಯಿಗೇ ಸಿಹಿ ಹಾಕ್ತೇನಿ ಶೀಲಾ" ಎಂದು ಅವಳತ್ತ ಕಣ್ಣು ಮಿಟುಕಿಸಿ ಸುಂದರವಾಗಿ ನಕ್ಕ ಅಭಯ.

ಅವಳಲ್ಲಿ ಲಜ್ಜೆಯ ತೆರೆಗಳನ್ನು ಎಬ್ಬಿಸಿದ ಆಭಯನ ಮುಂದೆ ನಿಲ್ಲಲಾರದೆ ಶೀಲಾ ಒಳಗೆ ಓಡಿದಳು. ದೇವಕಿ ಬರುವವರೆಗೂ ಅಭಯ ಶೀಲಾನ ಅವ್ವನೊಡನೆ ಹರಟೆ ಹೊಡೆಯುತ್ತಿದ್ದ.

ಧಡಧಡಿಸುತ್ತಿದ್ದ ಎದೆಯನ್ನು ಒತ್ತಿ ಹಿಡಿದುಕೊಂಡು ಹಾಸಿಗೆಗೆ ಒರಗಿ ಕಣ್ಮುಚ್ಚಿದಳು ಶೀಲಾ. ಅಭಯನ ತುಂಟ ಕಣ್ಣುಗಳು ತನ್ನನ್ನು ಎಷ್ಟು ರೀತಿಯಲ್ಲಿ ಕುಣಿಸುತ್ತಾವಲ್ಲ. ಅವನ ಮಾತು, ನಗು, ನಡತೆ ಎಲ್ಲವೂ ತನ್ನನ್ನು ಸೆಳೆಯುತ್ತಲೇ ಇವೆ. ಅವನು ಇಂಟರವ್ಯೂಗೆ ಎಂದು ಬಂದಾನು ಎಂದು ತನ್ನ ಜೀವ ದಾರೀ ನೋಡುತ್ತದೆ. ಅವನು ಹತ್ತಿರ ಇರಬೇಕು ಎನ್ನುವ ಆಸೆಯುಲ್ಲದೆ ಕೆಲಸ ಸಿಕ್ಕು ಎಲ್ಲಿಯಾದರೂ ದೂರ ಹೋದಾನು ಎನ್ನುವ ಭಯವೂ ಇದೆ. ಇದೆಂಥ ಹುಚ್ಚು? ಇದಕ್ಕೇ ಪ್ರೇಮ ಪ್ರೀತಿ ಎನ್ನುತ್ತಾರೆಯೆ? ಅಭಯ ಬಾಯಿಬಿಟ್ಟು ಮಾತನಾಡದಿದ್ದರೂ ಅವನ ಮನದ ಆಸೆ ತನಗೆ ನಿಚ್ಚಳವಾಗಿದೆ. ಕೆಲಸವೊಂದು ಸಿಕ್ಕಿದ್ದರೆ ಇಷ್ಟರಲ್ಲಿ ಕೇಳಿಯೇ ಬಿಡುತ್ತಿದ್ದನೇನೋ.

ಒಂದು ವೇಳೆ ಕೇಳಿದರೆ ಆಗ ತಾನೇನು ಮಾಡಬೇಕು? ನಿಜ ಹೇಳಬೇಕೆ? ವಿಷಯ ತಿಳಿದ ಮೇಲೆ ಆವನು ದೊಡ್ಡ ಮನಸು ಮಾಡಿ ಮದುವೆಗೆ ಒಪ್ಪ ಬಹುದೇ? ಉಹುಂ. ಈ ಗಂಡಸರನ್ನು ನಂಬಲು ಸಾಧ್ಯವಿಲ್ಲ. ಶೀಲಕೆಟ್ಟ ಹುಡುಗಿಯೆಂದು ಮುಖತಿರುವಿ ಹೋಗಬಹುದು. ಇವರಿಗೆಲ್ಲ ಅಪ್ಪಟ ತಾಜಾ ಹೆಣ್ಣೇಬೇಕಲ್ಲ!

ತಾನು ಮತ್ತು ಅವ್ವ ಬಿಟ್ಟರೆ ಈ ಚಾಳಿನಲ್ಲಿ ಯಾರಿಗೂ ತನ್ನ ಬಗ್ಗೆ ಏನೂ ತಿಳಿದಿಲ್ಲ. ಅಂಥ ಪ್ರಸಂಗವೇ ಇನ್ನೂ ಎದುರಾಗಿಲ್ಲ. ಒಂದು ವೇಳೆ ತಿಳಿದರೆ ತನ್ನ ಬಾಳು ಇದೇರೀತಿ ಸುಗಮವಾಗಿ, ಸಂತೋಷದಿಂದ ನಡೆಯು ವದೇ. ಇದೇ ಕಮಲಕ್ಕ ತನ್ನನ್ನು ತಿರಸ್ಕಾರದಿಂದ ನೋಡಬಹುದು. ಸುಂದರಮ್ಮ ದೇವಕಿಯರು ತಮ್ಮ ಮನೆಯ ಮೆಟ್ಟಿಲು ಹತ್ತಗೊಡಲಿಕ್ಕಿಲ್ಲ. ಮಾಲೀಕರು ಮನೆ ಖಾಲಿಮಾಡಲು ಹೇಳಬಹುದು. ಬೇರೆ ಯಾರೂ ಮನೆ ಬಾಡಿಗೆಗೆ ಕೊಡಲಿಕ್ಕಿಲ್ಲ. ಹೌದು, ವಿಷಯ ತಿಳಿದ ಯಾರೂ ತನ್ನನ್ನು ಕ್ಷಮಿಸ ಲಿಕ್ಕಿಲ್ಲ. ತಪ್ಪು ತನ್ನೊಬ್ಬಳದೇ ಅಲ್ಲ ನಿಜ. ಆದರೆ ಸಮಾಜದಲ್ಲಿ ನೀತಿ ಇರುವದೇ ಗಂಡಿಗೊಂದು, ಹೆಣ್ಣಿಗೊಂದು. ತನಗಾದ ಅನ್ಯಾಯವನ್ನು ಈ ಸಮಾಜ ಸರಿಪಡಿಸಬಲ್ಲದೇ? ಉಹುಂ. ತನ್ನ ಗೊಡವೆ ಆದಕ್ಕೆ ಬೇಕಿಲ್ಲ– ತಾನಾದರೂ ಏಕೆ ಸತ್ಯವನ್ನು ತಿಳಿಸಿ, ತನ್ನ ಜೀವನ ಹಾಳು ಮಾಡಿಕೊಳ್ಳ ಬೇಕು? ಅವ್ವ ತೀರಿದ ಮೇಲೆ ತಾನು ಒಬ್ಬಂಟಿಯಾಗಿ ದಿನ ದೂಡಬೇಕೇ? ದೇಹವನ್ನು ದಂಡಿಸಿಕೊಂಡು, ಇಷ್ಟೊಂದು ಕಠಿಣತಮ ತಪಸ್ಸು ತಾನು ಮಾಡಿದರೂ ತನಗೆ ಜನರ ಕುಹಕದ ನಗೆ, ಚುಚ್ಚುಮಾತುಗಳಿಂದ ಬಿಡುಗಡೆ ಯಿಲ್ಲ. ಅವ್ವ ಅಂತೂ ನನ್ನ ತಲೆಯ ಮೇಲೆ ನಾಲ್ಕು ಅಕ್ಕೀಕಾಳು ಹಾಕ ಬೇಕೆಂದೇ ಜೀವಹಿಡಿದಿದ್ದಾಳೆ.

"ಈ ಸಾರೆ ಹ್ಯಾಂಗರೆ ಮಾಡಿ ಅಭಯನ ಮದುವಿ ಮಾಡೇಬಿಡಬೇ ಕಂತೀವಿ ಅಂತ ದೇವಕಿ ಅಂತಿದ್ಲಪ್ಪಾ. ಎಲ್ಲ್ಯರೆ ಹುಡುಗೀ ನೋಡಿಯೇನು?" ಅವ್ವನ ಮಾತೂ ಮದುವೆಗೇ ಬಂದಿತ್ತು. ಅರ್ಧ ಕುತೂಹಲದಿಂದ ಅರ್ಧ ಹೆದರಿಕೆಯಿಂದ ಶೀಲಾ ಎದ್ದು ಬಂದು ಬಾಗಿಲಿಗೆ ಒರಗಿ ನಿಂತಳು.

"ಹುಡುಗೀನ್ನ ನೋಡೀನ್ರಿ ಆದರ ನೌಕರಿ ಒಂದ ಸಿಗಬೇಕಲ್ರಿ" ಎನ್ನುತ್ತ ಶೀಲಾಳನ್ನು ನೋಡಿದ ಅಭಯ.

"ಆದರಾಗೇನದ, ನೌಕರಿ ಇದ್ದ ಹುಡುಗೀನ್ನ ಮಾಡಿಕೊಂಡರಾತು; ಮದುವೀನೂ ಆಗ್ತದ, ನಿಮ್ಮ ಆರ್ಥಿಕ ಸಮಸ್ಯಾನೂ ಬಗೀಹರೀತದ." ಎಂದು ಶೀಲಾ ನಯವಾಗಿ ಸೂಚಿಸಿದಳು.

ಅವಳ ಮಿಂಚುಕಣ್ಣುಗಳನ್ನು ನೋಡಿ 'ನಿನ್ನ ಗುಟ್ಟು ಗೊತ್ತಾಯಿತು' ಎನ್ನುವಂತೆ ಅಭಯ ನಕ್ಕ. ಶೀಲಾನ ಅವ್ವ ಬೆರಗಾಗಿ ಇಬ್ಬರನ್ನೂ ದಿಟ್ಟಿಸಿದಳು.



# ಹೋಲಿಕೆ ಸಾಧ್ಯವಿಲ್ಲ

'ಪೋಸ್ಟ' ಎನ್ನುವ ಶಬ್ದ ಕಿವಿಗೆ ಬಿದ್ದ ನಿಮಿಷದ ಮೇಲೆ ಅಮಿತ ಪತ್ರ ಕೈಯ್ಯಲ್ಲಿ ಹಿಡಿದು ಕೂಗುತ್ತ ಬಂದ.

"ಅವ್ವಾ, ಚಿಕ್ಕವ್ವನ ಪತ್ರ ಬಂದಾಂಗ ಕಾಣ್ತದ, ಅಕ್ಷರ ಹಾಂಗs ಅದಾವ." ಚಹಾ ಸೋಸುತ್ತಿದ್ದ ಶಂಕುಂತಲೆಯ ಕೈ ನಡುಗಿ, ಚಹಾ ತುಳುಕಿ ಸ್ವಲ್ಪವೇ ಕಿಟ್ಲಿಯ ಹೊರಗೆ ಬಿತ್ತು.

"ಮತ್ತೇನ ಬರೆದಾಳೋ ಇಕೀ. ಈ ವಾರದಾಗ ಇದು ಮೂರನೇ ಪತ್ರ. ನಾ ಉತ್ತರ ಕೊಡದಿದ್ರೂ ಮತ್ತ ನನಗs ಗಂಟ ಬಿದ್ದಾಳ" ಎಂದು ಮನಸ್ಸಿನಲ್ಲಿಯೇ ವಸುಂಧರೆಯನ್ನು ಬಯ್ದುಕೊಳ್ಳುತ್ತ ಚಹಾ ಒಯ್ದು ಗಂಡ, ಮಕ್ಕಳಿಗೆ ಕೊಟ್ಟು ತಾನೂ ಕುಡಿದು ಪತ್ರ ಒಡೆದಳು.

ಮತ್ತೆ ಅದೇ ವಿಷಯ, ಹೇಗಾದರೂ ಮಾಡಿ ನನಗೆ ಹಣದ ಸಹಾಯ ಮಾಡಬೇಕು. ಬಳಸಿಕೊಂಡ ಹಣ ಮುಂದಿನ ವಾರದಲ್ಲಿ ತುಂಬಿಸದಿದ್ದರೆ ನನ್ನ ಗಂಡನ ನೌಕರಿ ಹೋಗುತ್ತದೆ. ಕೇಸು ಹಾಕುತ್ತಾರೆ. ನೀನು ಹಣ ಕೊಟ್ಟರೆ ನನ್ನ ಸಂಸಾರ ಉಳಿಸಿದ ಪುಣ್ಯ ನಿನಗೆ ಬರುತ್ತದೆ. ನನಗಾದರೂ ನಿನ್ನನ್ನು ಬಿಟ್ಟ ಬೇರೆ ಯಾರು ಗತಿ ? ಯಾರನ್ನು ಕೇಳಲಿ? ಏನು ಮಾಡಲಿ? ಒಂದೂ ತಿಳಿಯದೆ ಒದ್ದಾಡುತ್ತಿದ್ದೇನೆ. ಅವರು ಮಾಡುವ ಪ್ರಯತ್ನವೆಲ್ಲ ಮಾಡಿ ಮುಗಿಸಿ ಅನ್ನ, ನೀರು ಬಿಟ್ಟು ಹಾಸಿಗೆ ಹಿಡಿದಿದ್ದಾರೆ ಎಂದೆಲ್ಲಾ ಮತ್ತೆ ಅದೇ ಗೋಳು ತೋಡಿಕೊಂಡು ಕೊನೆಗೆ ಒಂದು ಸಾಲು ಸೇರಿಸಿದ್ದಳು.

"ಅವರ ಮೇಲೆ ಕೇಸಾಗಿ ನೌಕರಿ ಕಳೆದುಕೊಂಡರೆ ನಾನು ಇಬ್ಬರು ಮಕ್ಕಳೊಡನೆ ಬಾವಿಗೆ ಬಿದ್ದು ಸಾಯುತ್ತೇನೆ. ಅದನ್ನು ಬಿಟ್ಟರೆ ನನಗೆ ಬೇರೆ ಮಾರ್ಗವೇ ಇಲ್ಲ." ಪತ್ರದ ಮೇಲೆ ಮೊದಲೇ ಇದ್ದ ಕಣ್ಣೀರ ಕಲೆಯೊಡನೆ ಶಕುಂತಲೆಯ ಕಣ್ಣೀರೂ ಸೇರಿಕೊಂಡವು. ಪತ್ರವನ್ನು ಗಂಡನ ಮುಂದಿಟ್ಟು ನಿಧಾನವಾಗಿ ಎದ್ದು ಹೋಗಿ ತನ್ನ ಮಂಚದಲ್ಲಿ ಉರುಳಿಕೊಂಡಳು.

ವಸುಂಧರೆಗೂ ತನಗೂ ವಯಸ್ಸಿನಲ್ಲಿ ಎಂಟು ವರುಷಗಳ ಅಂತರ ಏದೆ. ನಡುವೆ ತನಗೊಬ್ಬ ಪುಟ್ಟ ತಮ್ಮ ಆಸ್ಪತ್ರೆಯಲ್ಲಿ ಹುಟ್ಟಿ ಅಲ್ಲಿಂದಲೇ ಮಣ್ಣು ಸೇರಿದ್ದ. ಆ ವಿಷಯ ತನಗೆ ಕೇಳಿ ಗೊತ್ತು. ಮನೆಗೆ ಬಂದ ಮೇಲೆ ಅವ್ವ ಎಷ್ಟೋ ದಿನ ಆವನನ್ನು ನೆನೆಸಿ ಅಳುತ್ತಿದ್ದಳು. ಮುಂದೆ ಐದಾರು ವರುಷಗಳ ಮೇಲೆ ಹುಟ್ಟಿದವಳು ವಸುಂಧರೆ. ಮನೆಯಲ್ಲಿ ತನ್ನೊಡನೆ ಆಡಲು ಪುಟ್ಟ ಮಕ್ಕಳಿಲ್ಲದೆ ಬೇಜಾರಾಗಿದ್ದ ತನಗೆ ವಸುಂಧರೆ ತುಂಬ ಪ್ರೀತಿ ಯವಳೇ ಆಗಿದ್ದಳು. ಹೆಣ್ಣಾಗಲಿ, ಗಂಡಾಗಲಿ ಆರೋಗ್ಯವಾಗಿದ್ದ ಎರಡೇ ಮಕ್ಕಳು ಸಾಕು ಎಂದು ಅಪ್ಪ-ಅವ್ವ ತೀರ್ಮಾನಿಸಿದ್ದು ತನಗೆ ದೊಡ್ಡವ ಳಾದ ಮೇಲೆ ತಿಳಿಯಿತು. ತಾನು ಅವಳಿಗಿಂತ ದೊಡ್ಡವಳಾಗಿದ್ದುದರಿಂದ ಅವಳ ಉಪಚಾರವನ್ನು ತಾಯಿಯಷ್ಟೇ ಸಂಭ್ರಮ, ಸಂತೋಷದಿಂದ ಮಾಡುತ್ತಿದ್ದೆ. ತಾನು ಅವಳೊಡನೆ ಯಾವ ವಿಷಯಕ್ಕೂ ಜಗಳ ಮಾಡುತ್ತಿರ ಲಿಲ್ಲ. ದೊಡ್ಡವಳಾಗಿದ್ದುಕೊಂಡು ಹಾಗೆ ಜಗಳ ಮಾಡುವದು ಸಣ್ಣತನ ಎನ್ನುವ ಭಾವನೆ ಅಷ್ಟು ಚಿಕ್ಕ ವಯಸ್ಸಲ್ಲಿಯೇ ತನ್ನಲ್ಲಿ ಬೇರೂರಿತ್ತು. ಅವಳು ಚೆಲುವೆಯಾಗಿ ರೂಪುಗೊಳ್ಳುವ ಹೊತ್ತಿಗೆ ಗಂಗಾಧರನೊಡನೆ ತನ್ನ ಮದುವೆಯಾಗಿ ಬಿಂದು ಹುಟ್ಟಿದ್ದಳು. ತಂಗಿಯ ರೂಪ ನೋಡಿ ತನಗೆ ಹೆಮ್ಮೆ ಎನಿಸುತ್ತಿತ್ತೇ ಹೊರತು ಅಸೂಯೆ ಹುಟ್ಟಿರಲಿಲ್ಲ. ಮೊದಲ ದರ್ಜೆಯ ಸರ್ಕಾರಿ ನೌಕರ ಜಗದೀಶನೊಡನೆ ಅವಳ ಮದುವೆಯಾದಾಗ ಅಪ್ಪ -ಅವ್ವ ಕೈ ಬಿಟ್ಟು ಧಾರಾಳವಾಗಿಯೇ ಹಣ ಖರ್ಚು ಮಾಡಿದ್ದರು. ಕೂಡಿದ ಜನರೆಲ್ಲ ವಸುಂಧರೆಯ ದೈವವನ್ನು ಹಾಡಿ ಹೊಗಳಿದುದನ್ನು ಕೇಳಿ ತನ್ನ ಮನಸ್ಸು ಖಿನ್ನವಾಗಿತ್ತು. ಎಲ್ಲಿಯೋ ಮನಸ್ಸಿನ ಮೂಲೆಯಲ್ಲಿ ಅಸೂಯೆಯ ನೆರಳು ಹುಟ್ಟಿಕೊಂಡಿತು. ಆದರೆ ಅವಳು ತನ್ನ ಮನೆಯಲ್ಲಿ, ನಾನು ನನ್ನ ಊರಲ್ಲಿ. ಯಾವಾಗಲಾದರೊಮ್ಮೆ ಹಬ್ಬ ಹುಣ್ಣಿವೆಗಳಿಗೆ ತವರಿನಲ್ಲಿ ಕೂಡಿ ದಾಗ ಉಂಡು, ತಿಂದು, ನಕ್ಕು ನಲಿಯುತ್ತಿದ್ದೆವು. ಅವಳ ಗಂಡ ತಂದು ಕೊಟ್ಟ ಹೊಸ ನಮೂನೆಯ ಒಳ್ಳೆಯ ಸೀರೆಗಳನ್ನು ಹೊರಗೆ ಹೋಗು ವಾಗಲೆಲ್ಲ ವಸೂ ನನಗೂ ಉಡಲು ಕೊಡುತ್ತಿದ್ದಳು. ಲೆಕ್ಚರರ್ ಗಂಗಾಧರನ ಆದಾಯದ ಮಿತಿಯನ್ನರಿತ ತಾನು ಹಾಗೆ ಮಾಡುವದು ಸಾಧ್ಯವಿರಲಿಲ್ಲ. ಆಗ ಅಪ್ಪ-ಅವ್ವನ ಮೇಲೆ ಸಿಟ್ಟೂ ಬರುತ್ತಿತ್ತು ತಮ್ಮಿಬ್ಬರಲ್ಲಿ ತಾರತಮ್ಯ

ಮಾಡಿಪರೆಂಪು. ಆದರೆ ಗಂಗಾಧರ ತನ್ನ ಸುಖಕ್ಕೇನೂ ಕಡಿಮೆ ಮಾಡಿರಲಿಲ್ಲ. ತನ್ನ ಯೋಚನೆ, ಸಲಹೆಗಳಿಗೆ ಕಿವಿ ಕೊಡುತ್ತಿದ್ದ. ತನಗೆ ತನ್ನದೇ ಆದ ವ್ಯಕ್ತಿತ್ವ ಬೆಳೆಸಿಕೊಳ್ಳುವ ಸ್ವಾತಂತ್ರ್ಯವಿತ್ತು. ಬಹುಶಃ ಇವೆಲ್ಲ ಕಾರಣಗಳಿಂದಲೋ ಏನೋ ತನ್ನ ಅಸಮಾಧಾನ, ಸಿಟ್ಟು ಸಿಡಿಯುವ ಅವಕಾಶ ಬರಲೇ ಬರಲಿಲ್ಲ.

ಒಂದು ಸಲ ತವರಿನಲ್ಲಿ ಕೂಡಿದಾಗ ಜಗದೀಶ ಕುಡಿಯಲು ಕಲಿತಿದ್ದಾನೆಂದು ವಸುಂಧರೆ ಹೇಳಿದಳು. ಆಗ ತಮ್ಮಿಬ್ಬರಲ್ಲಿ ಒಂದು ಚರ್ಚೆಯೇ ನಡೆಯಿತು.

"ಅಲ್ಲs ವಸೂs ಜಗದೀಶ ಕುಡೀತಾರಂತ ಹೇಳತೀ, ಮತ್ತ ನೀ ಸುಮ್ಮನs ಇರತೀ ಏನು? ನಿನಗ ಅಸಹ್ಯ ಅನಸೂದಿಲ್ಲಾ?"

"ಅಲ್ಲಕ್ಕಾ, ಅವರೇನೂ ಕುಡುಕರಲ್ಲಾ. ದೊಡ್ಡ ದೊಡ್ಡ ಮಂದಿ ಪಾರ್ಟಿಗೆ ಕರದಾಗ ಕಂಪನಿಗೆ ಸ್ವಲ್ಪರೆ ಕುಡೀಬೇಕಾಗತವ. ಇಂಥ ಪಾರ್ಟಿ ಈಗ ಸಾಮಾನ್ಯ ಆಗಿ ಬಿಟ್ಟಾವ. ಒಂದು ಖುಷಿಗೆ ಅನ್ನು, ವ್ಯವಹಾರದ ಮಾತಿಗೆ ಅನ್ನು ಪಾರ್ಟಿ ನಡದs ನಡೀತಾವ."

"ಆದರೂ ಕುಡಿತಾ ಅನ್ನೂದು ಒಂದು ದುಶ್ಚಟಾ ನೋಡು. ಮೊದಲು ಸ್ವಲ್ಪ ಸ್ವಲ್ಪ ಅಂತ ಸುರೂ ಆಗಿದ್ದು ಮುಂದ ಶನೀ ಹಾಂಗ ಗಂಟು ಬೀಳುತದ. ಅದಿಲ್ಲದಿದ್ದರೆ ಕೆಲಸ ನಡಿಯೂದೇ ಇಲ್ಲಾ ಅನ್ನೊ ಅಷ್ಟು ಮನುಷ್ಯಾ ಸೆರೇದ ದಾಸ ಆಗ್ತಾನ. ಅದಕ್ಕ ನೀನs ಜಗದೀಶನನ್ನು ಸ್ವಲ್ಪ ಕಂಟ್ರೋಲ್ ಮಾಡು" ಅಂದೆ.

"ಅಷ್ಟು ಪರಿ ಪ್ರಜ್ಞಾ ತಪ್ಪೂವಷ್ಟು ಏನ ಕುಡಿಯೂದಿಲ್ಲ ಬಿಡು ಅವರು. ದೊಡ್ಡವರ ಪಾರ್ಟಿಯೊಳಗೆಲ್ಲಾ ವಿದೇಶಿ ಮದ್ಯ ಕುಡಿತಾರ, ಅದೂ ಸ್ವಲ್ಪ. ಅದರಿಂದ ಆರೋಗ್ಯಕ್ಕೆ ಛೊಲೋನ ಅಂತ ಹೇಳತಾರ. ನಮ್ಮ ಆಳತ್ಯಾಗ ನಾಪಿದ್ರ್ಯಾತು. ಚಟಕ್ಕ ಬೀಳೂ ಅಪಾಯನ ಇಲ್ಲಾ. ಮಾಮಾಗ ಇಂಥ ಪಾರ್ಟಿಗೀರ್ಟಿಗೆ ಹೋಗೂ ಕೆಲಸಾ ಬೀಳೂದಿಲ್ಲಾ ಅದಕ್ಕ ನೀ ಹಿಂಗ ಅಂತೀ."

"ಅಲ್ಲಾ ವಸೂ, ಇವರ ಕಲೀಗ್ ಒಬ್ಬರು ಸುಮ್ಮನs ಕಂಪನೀಗೆ ಅಂತ ಕುಡೀಲಿಕ್ಕೆ ಸುರು ಮಾಡಿದವರು ಪಗಾರ, ಆಸ್ತಿ, ಎಲ್ಲಾ ಕಳ ಕೊಂಡು ಲಿವ್ಹರ ಕ್ಯಾನ್ಸರ ಆಗೆ ಸತ್ತರಂತೆ. ಅದಕ್ಕ ಹೆದರಿಕೆ ಆಗಿ ನಿನಗ ಬುದ್ಧಿ ಹೇಳಿದೆ. ನಿನಗs ಇಷ್ಟು ಧೈರ್ಯಾ ಇದ್ದರ ಆತು ಬಿಡು. ನಾ ಯಾಕ ಚಿಂತೀ ಮಾಡಲಿ?"

ಆದರೆ ಮುಂದೆ ವಸುಂಧರೆಗೆ ಸಂಸಾರವೇ ಚಿತೆಯಾಗಿತ್ತು. ಜಗದೀಶ ಕುಡಿತಕ್ಕೆ ಪೂರ್ತಿ ವಶವಾಗಿದ್ದ. ದಿನವೂ ಅವನು ಕುಡಿಯಲೆ ಬೇಕು. ಪಗಾರ ಸಾಲದೆ ಅಲ್ಲಲ್ಲಿ ಕೈಗಡಮಾಡುತ್ತಿದ್ದ. ವಸುಂಧರೆಯ ಮೈಮೇಲಿನ ಬಂಗಾರವೂ ಕರಗಿಹೋಗಿತ್ತು. ಅಪ್ಪ-ಅವ್ವ ಬಿಟ್ಟು ಹೋದ ಮನೆ ಮಾರಿದ್ದರಿಂದ ತಮ್ಮಿಬ್ಬರಿಗೂ ತಲಾ ಮೂವತ್ತು ಸಾವಿರ ರೂಪಾಯಿ ಬಂದಿದ್ದವು. ಜಗದೀಶ ವಸೂನ ಪಾಲಿನದನ್ನು ತೆಗೆದು ಖರ್ಚು ಮಾಡಿ ಮುಗಿಸಿದ್ದ. ವರ್ಷ ವರ್ಷ ಅವಳ ಕಷ್ಟದ ಕಥೆ ಬೆಳೆಯುತ್ತಲೆ ಇತ್ತು. ಈಗ ಕುಡಿದ ಮಬ್ಬಿನಲ್ಲಿ ತಪ್ಪುಮಾಡಿ ಹಾಕಿಕೊಂಡಿದ್ದಾನೆ. ಆ ಹಣ ಈ ವಾರದಲ್ಲಿ ತುಂಬದಿದ್ದರೆ ಅವನ ಮನೆಯೇ ನಾಶವಾಗುತ್ತದೆ.

ಆದರೆ ಈಗ ತಾನೇನು ಮಾಡಬೇಕು? ನಮ್ಮ ಕಷ್ಟ ಸುಖಕ್ಕಾಗುವವರು ಬೇರೆ ಯಾರೂ ಇಲ್ಲ. 'ಆಡಿನ ಮರೀಹಾಂಗ ಜೋಡಾಗಿ ನೀವಿಬ್ರೂ ಅದಿರಿ. ಶಶೂ ನೀ ದೊಡ್ಡಾಕಿ, ವಸೂನ್ನ ಸಂಭಾಳಿಸು. ನೀವಿಬ್ರೂ ಒಂದಾಗಿ ಇರ್ರಿ,' ಅವ್ವ ಸಾಯುವಾಗ ತನ್ನ ಕೈ ಹಿಡಿದುಕೊಂಡು ಕಣ್ಣೀರು ಹಾಕಿದಳು. ವಸು ಪತ್ರದಲ್ಲಿ ಬರೆದಂತೆ ನಿಜವಾಗಿಯೂ ಮಕ್ಕಳೊಡನೆ ಸತ್ತರೆ ತಾನು ಅಕ್ಕನಾಗಿ ಬದುಕಿದ್ದೂ ಏನು ಸಾರ್ಥಕ ? ತಾನು ಮುಂದೆ ಸುಖವಾಗಿ ಇರ ಬಲ್ಲೆನೇ ? ಕೇವಲ ತನ್ನ ಸುಖವನ್ನೇ ನೋಡಿಕೊಂಡ ಸ್ವಾರ್ಥಿ ತಾನಾಗುವ ದಿಲ್ಲವೇ ? ಹಾಗೆಂದು ಅವಳ ಇಡೀ ಸಂಸಾರವನ್ನು ಸಾಕುವಷ್ಟು ಶ್ರೀಮಂತಿಕೆ ತನಗೆ ಇಲ್ಲ. ಅವಳಿಗೆ ಯಾವ ರೀತಿ ಸಹಾಯ ಮಾಡಲಿ ? ಅಕ್ಕನಾಗಿ ತನ್ನ ಕರ್ತವ್ಯ ತಾನು ಮಾಡದೇ ಇರುವದಂತೂ ಸಾಧ್ಯವೇ ಇಲ್ಲ. ಶಕುಂತಲೆಯ ತಲೆ ಸಿಡಿಯ ಹತ್ತಿತ್ತು. ದಿಂಬಿನ ಮೇಲೆ ತಲೆ ಅತ್ತಿತ್ತ ಹೊರಳಿಸುತ್ತ ಎರಡೂ ಕೈಗಳಿಂದ ಗಟ್ಟಿಯಾಗಿ ತಲೆ ಒತ್ತಿಕೊಂಡಳು. ಬಂಗಾರದ ಬಳೆಗಳು

ಸಳಸಳ ಶಬ್ದ ಮಾಡಿ ಆವಳ ಲಕ್ಷ್ಯ ಸೆಳೆದವು. ಅವುಗಳನ್ನು ನೋಡುತ್ತಿದ್ದಂತೆ ಒಂದು ಯೋಚನೆ ಹೊಳೆಯಿತು. ಅಲ್ಲಿಂದಲೇ ಗಂಡನನ್ನು ಕೂಗಿದಳು.

ಹೆಂಡತಿಯು ಮಾನಸಿಕ ತೊಳಲಾಟವನ್ನು ಕೆಲವು ದಿನಗಳಿಂದ ನೋಡುತ್ತಿದ್ದ ಗಂಗಾಧರ ಅಸಹಾಯಕನಾಗಿದ್ದ. ತನ್ನ ಉಳಿತಾಯದೊಡನೆ ಶಕೂನ ಹಣವನ್ನು ಕೂಡಿಸಿ ಒಂದು ಸೈಟುಕೊಂಡು ಮನೆ ಕಟ್ಟಿಸುತ್ತಿದ್ದ ಗಂಗಾಧರನೇ ಈಗ ಅಲ್ಲಲ್ಲಿ ಸಾಲಗಾರನಾಗಿದ್ದ. ನಾದಿನಿಗೆ ತಾನು ಯಾವ ರೀತಿ ಸಹಾಯ ಮಾಡಬಲ್ಲೆ, ಒಂದು ವೇಳೆ ಮಾಡಿದರೂ ಅದು ಸಾರ್ಥಕ ಸಹಾಯವಾದೀತೆ ಎಂದು ಚಿಂತಿಸುತ್ತಿದ್ದ. ಹೆಂಡತಿಯು ಕರೆ ಕೇಳಿ ಎದ್ದು ಬಂದ. ಶಕುಂತಲೆ ಸುತ್ತು ಬಳಸದೇ ನೇರವಾಗಿ ವಿಷಯಕ್ಕೆ ಇಳಿದಳು.

"ನೀವೇನೂ ತಿಳಕೊಳ್ಳದಿದ್ದರೆ ಒಂದು ಮಾತು ಹೇಳ್ತೀನಿ. ನನ್ನ ಮದುವ್ಯಾಗ ಅಪ್ಪಕೊಟ್ಟ ಈ ಬಳೆ ಐದು ತೊಲಿ ಅದಾವ, ಇವನ್ನ ವಸೂಗ ಕೊಡಬೇಕಂತ ಮಾಡೇನಿ."

ಒಂದು ಕ್ಷಣ ಗಂಗಾಧರ ಸುಮ್ಮನಿದ್ದ. "ಬಿಂದೂಗ ಮದುವ್ಯಾಗ ಇವನ್ನ ಕೊಡತೇನಿ ಅಂತಿದ್ದಿ. ಇಷ್ಟ ತುಟ್ಟೀ ದಿನದಾಗ ನಮಗ ಇನ್ನ ಬಂಗಾರ ಕೊಳ್ಳೋದು ಸಾಧ್ಯಾನ ಇಲ್ಲಾ ನೋಡು. ಇನ್ನೊಮ್ಮೆ ವಿಚಾರ ಮಾಡು."

"ಹೌದ್ರಿ, ಇವನ್ನ ಖರೇ ಅಂದ್ರ ಮಗಳಿಗೇ ಕೊಡಬೇಕಾಗಿತ್ತು! ಆದರ ಈಗ ಎಂಥ ಪರಿಸ್ಥಿತಿ ಬಂದದ ನೋಡ್ರಿ. ವಸೂ ಬರದಾಂಗ ಜೀವಕ್ಕೆ ಏನರೆ ಮಾಡಿಕೊಂಡರ ಅಕ್ಕ ಆಗಿ ನನ್ನ ಮನಸ್ಸಿಗೆ ಹ್ಯಾಂಗ ಅನಸ್ತದ ಹೇಳ್ರಿ. ಮಗಳ ನಸೀಬದಾಗ ಬಂಗಾರ ಹಾಕ್ಕೋಳ್ಳೋದು ಇದ್ದರ ಮುಂದ ಸಿಕ್ಕೀತು. ಈ ಬಳೀ ಹೋದರ ನನಗೇನ ತಿರುಗಿ ಸಿಗೂದಿಲ್ಲಾ ಅನ್ನೂದು ಖಾತ್ರಿ ಅದ. ಆದರ ತಂಗಿ ಸಲುವಾಗಿ ನನ್ನ ಕರ್ತವ್ಯ ಮಾಡಿದೆ ಅನ್ನೊ ಸಮಾಧಾನ ಇರ್ತದ" ಎನ್ನುತ್ತ ಹೊಟ್ಟೆಯಲ್ಲಿಯ ದುಃಖವನ್ನೆಲ್ಲ ಹೊರಗೆಡವುವಂತೆ ಶಕುಂತಲೆ ಜೋರಾಗಿ ಅತ್ತಳು.

ತುಂಬ ತೃಪ್ತಿ, ಶಾಂತಿ, ಸಮಾಧಾನದಿಂದ ಇರುತ್ತಿದ್ದ ತನ್ನ ಮನೆಯನ್ನು ದುಃಖದ ಮಡುವನ್ನಾಗಿಸಿದ ಕುಡುಕ ಜಗದೀಶ ಹಾಳಾಗಿ ಹೋಗಲಿ ಎಂದು ಕೊಂಡ ಗಂಗಾಧರ. ಆ ಕ್ಷಣದಲ್ಲಿ ಅವನನ್ನು ದ್ವೇಷಿಸಿದ; ಆದರೂ ಆವನು ಹೆಂಡತಿಯ ಮಾತಿಗೆ ಒಪ್ಪಿಕೊಂಡು ಅವಳ ಕಣ್ಣೀರು ಒರಸಿ, ಬೆನ್ನು ನೇವರಿಸಿ ಹೇಳಿದ:

"ಆಗಲಿ ಶಕೂ, ನಾಳೇ ನಾವಿಬ್ಬರೂ ಹೋಗಿ ಜಗದೀಶಗ ಬಳೀ ಕೊಟ್ಟು ನಾಲ್ಕು ಬುದ್ಧೀ ಮಾತು ಹೇಳಿ ಬರೂಣು. ಅವನೂ ಕುಡಿತ ಬಿಟ್ಟು ಮನುಷ್ಯಾ ಆಗಲಿ. ವಸೂ ಕಲತಾಕಿ ಅದಾಳ. ಒಂದು ನೌಕರೀ ಹಿಡದು ತಮ್ಮ ಕಾಲ ಮ್ಯಾಲೆ ತಾವು ನಿಲ್ಲಲಿಕ್ಕೆ ಕಲೀಲಿ. ಈ ಪ್ರಕರಣದಿಂದ ಅಂವಾ ತಿದ್ದಿಕೊಂಡರ ಮುಂದ ಒಂದಾನೊಂದು ಕಾಲಕ್ಕ ನಿನ್ನ ಬಳೀ ರೊಕ್ಕ ತಿರುಗಿ ಕೊಟ್ಟಾನು. ಹಾಂ. ತಿರುಗಿ ಕೊಡಬೇಕು ಅನ್ನು ಕರಾರು ಹಾಕೇ ಈ ಬಳಿ ಕೊಡೂಣಂತ, ಆತಿಲ್ಲೊ ಇನ್ನ ಸುಮ್ಮನಾಗು."

"ನೀವೂ ಭಾಳಾ ಆಶಾವಾದಿಗಳು" ಕಣ್ಣೀರಿನ ನಡುವೆ ಶಕುಂತಲೆ ನಕ್ಕಳು.

ಬಿಂದೂ ಹೊರಗಿನಿಂದಲೇ ಕೂಗಿದಳು. "ಅವ್ವಾ ಮಲ್ಲವ್ವ ಬಂದಾಳ, ಏನೋ ಕೆಲಸ ಐತೆಂತ."

ಮಲ್ಲವ್ವ ಹಳ್ಳಿಯಿಂದ ಹಾಲು ತಂದುಕೊಡಲು ಸುರುಮಾಡಿ ಹತ್ತಾರು ವರ್ಷಗಳೇ ಕಳೆದಿದ್ದವು. ಹಿಂಡಿದ ಹಾಲು ತಂದು ಕೊಡುವದು, ಆಗಾಗ ಹೊಲದಲ್ಲಿ ಬೆಳೆದ ಕಾಯಿಪಲ್ಲೆ ತರುವದು, ಪೇಟೆಯ ಧಾರಣೆಗಿಂತ ಕಡಿಮೆ ಮಾಡಿ ತಾನು ಬೆಳೆದ ಅಕ್ಕಡಿ-ಕಾಳು ತರುವದು, ಇವೆಲ್ಲದರಿಂದ ಮಲ್ಲವ್ವ ಮನೆಯುವಳಂತೆಯೇ ಆಗಿದ್ದಳು. ಎಮ್ಮೆ ಕೊಳ್ಳುವಾಗ ಬಡ್ಡಿ ಇಲ್ಲದೆ ಸಾಲ ಕೊಡುವದು, ತಮ್ಮ ಜವಳಿ ಅಂಗಡಿಯಲ್ಲಿ ಅವಳ ಮನೆಗೆ ಬೇಕಾಗುವಷ್ಟು ಅರಿವೆ–ಅಂಚಡಿ ಕೊಡಿಸುವುದು, ಹೆಣ್ಣು ಮಕ್ಕಳ ಮದುವೆಗೆ ಉಳಿತಾಯ ಮಾಡಲು ಹೇಳಿ ಬ್ಯಾಂಕಿನಲ್ಲಿ ರೊಕ್ಕ ಇರಿಸುವದು ಇತ್ಯಾದಿಗಳಿಗೆಲ್ಲ ಮಲ್ಲವ್ವನಿಗೆ ಶಕುಂತಲೆಯೇ ಆಧಾರ. ಮಲ್ಲವ್ವ ಒಯ್ದ ಹಣವನ್ನು ಇಂಥ ದಿನ ಕೊಡುತ್ತೇನೆಂದರೆ ಉಪವಾಸ ಬಿದ್ದಾದರೂ ತಿರುಗಿ ಮುಟ್ಟಿಸುವ ಛಲವಂತೆ.

ಶಕುಂತಲೆ ಮಲ್ಲವ್ವರಲ್ಲಿ ಅಂತಸ್ತಿನ ಅಂತರವಿದ್ದರೂ ಇಂಥ ಗುಣಗಳಿಂದ ಇಬ್ಬರೂ ಸಮಾನರು. ತನ್ನ ಸಂಸಾರದ ಕಷ್ಟ-ಸುಖಗಳನ್ನು ಅವ್ವಾರಲ್ಲಿ ತೋಡಿಕೊಂಡು ಮಲ್ಲವ್ವ ಹಗುರವಾಗಿ ಹಳ್ಳಿಗೆ ಹೋಗುತ್ತಿದ್ದಳು. ಅವಳ ಮಾತಿಗೆ ಕಿವಿ ಕೊಡುವವಲ್ಲದೆ ಪರಿಹಾರ, ಸೂಚನೆಗಳನ್ನು ಶಕುಂತಲೆ ಕೊಡುತ್ತಿದ್ದಳು. ಒಟ್ಟಿನಲ್ಲಿ ಅವರಿಬ್ಬರದೂ ಒಂದು ತರದ ಬಾಂಧವ್ಯ.

ಶಕುಂತಲೆಯನ್ನು ಕಂಡೊಡನೆ ಮಲ್ಲವ್ವ "ಯಾಕ್ರೀ ಅವ್ವಾರ, ಪಾಡ ಅದೀರಿಲ್ರಿ? ಯಾಕೋ ಮಾರಿ ಸಪ್ಪಗಾಗೈತಿ" ಎಂದಳು.

"ಏನಿಲ್ಲ ಮಲ್ಲವ್ವಾ, ಆರಾಮ ಅದೀನಿ. ಹ್ಯಾಂಗ ಅದಾನ ನಿನ್ನ ಗಂಡಾ, ದವಾಖಾನಿಯಿಂದ ಬಂದಿರೇನು?"

"ಹೂನ್ರಿ ಯವ್ವಾ. ನಿಮ್ಮ ಪುಣ್ಣೆದಿಂದ ಆಪರೇಸನ್ ನೆಟ್ಟಗ ಆತ್ರಿ, ಎಂಟ ದಿನಾ ಆತ್ರಿ ಮನಿಗೆ ಕಳಿಸಿ."

"ಮನೀಗೆ ಬಂದ ಮ್ಯಾಲೂ ಕಾಳಜಿ ಭಾಳ ತೊಗೋಬೇಕು ಮಲ್ಲವ್ವಾ. ದವಾಖಾನಿ ಬಿಲ್ಲು ಎಷ್ಟಾತು?"

"ಎಂಟನೂರ ರೂಪೈ ಆತ್ರಿ. ನೀವು ಐನೂರ ಕೊಟ್ಟರಿ. ಎಡ್ಡ ಆಡ ಮಾರಿ ಉಳದ ರೊಕ್ಕಾ ಜ್ವಾಡಣಿ ಮಾಡಿನ್ರಿ" ಎನ್ನುತ್ತ ಸೆರಗಿನಿಂದ ಒಂದು ಸಣ್ಣ ಕಾಗದದ ಪುಡಿಕೆ ಬಿಚ್ಚಿ ಶಕುಂತಲೆಯ ಕೈಯ್ಯಲ್ಲಿಟ್ಟಳು. ಅದನ್ನು ನೋಡಿ ಶಕುಂತಲೆ ದಂಗಾದಳು.

"ಏನ ಮಲ್ಲವ್ವಾ, ತಾಳೀ ಸಾಮಾನು ಯಾಕ ತಂದಿ?"

"ಯವ್ವಾ ನೀವು ರೂಪೈ ಕೊಟ್ಟು ಮೂರು ತಿಂಗಳಾತ್ರಿ. ಇನ್ನೂ ಕೊಡಾಕ ಆಗ್ಲಿಲ್ಲಾ. ನಿಮಗ ಕೊಡ್ತೀನಿ ಅಂದಿದ್ದೆ, ಮಾತ ತೆಪ್ಪಬಾರದ ಅಲ್ರಿ. ಅದಕ್ಕs ಇವತ್ತ ನಿಂಗವ್ವನ ಬದಲಿ ನಾನs ಹಾಲು ಹಾಕ ಬಂದಿನ್ರಿ. ಇವನ್ನ ಇಟಗೊಳ್ರಿ ನಿಮ್ಮ ರೊಕ್ಕಾ ಮುಟ್ಟಿಸಿ ಕೊಳ್ರಿ."

ಮೈ ತುಂಬ ಸೆರಗು ಹೊದ್ದು ತಲೆ ತಗ್ಗಿಸಿ ಕುಳಿತ ಮಲ್ಲವ್ವನನ್ನು ನೋಡಿ ಶಕುಂತಲೆಯ ಕಣ್ಣು ತುಂಬಿ ಬಂದವು. ಗಂಟಲೂ ಕಟ್ಟಿತು. ತೆಗೆದು

ಕೊಂಡ ಸಾಲಕ್ಕೆ ಪ್ರತಿಯಾಗಿ ತಾಳಿ ಬಿಚ್ಚಿಕೊಡುತ್ತಿದ್ದ ಮಲ್ಲವ್ವನೊಡನೆ ಕುಡಿತದ ಚಟಕ್ಕೆ ಬಲಿಯಾಗಿ ಅನ್ಯರ ಹಣಕ್ಕೆ ಕೈಯೊಡ್ಡುವ ಪ್ರಸಂಗ ತಂದುಕೊಂಡೂ ಜಗದೀಶನನ್ನು ಹೋಲಿಸಲು ಸಾಧ್ಯವಿಲ್ಲ ಎನಿಸಿತು ಶಕುಂತಲೆಗೆ.

ಇಂಥ ಮುಗ್ಧ ಜೀವಿಯ ತಾಳಿಯನ್ನು ತಾನು ಮುಟ್ಟಿದರೆ ತನ್ನ ಕೈ ಸುಟ್ಟೀತೆನ್ನುವಷ್ಟು ಹೆದರಿಕೆಯಿಂದ ತಟ್ಟನೆ ಪುಡಿಕೆಯನ್ನು ಮಲ್ಲವ್ವನ ಕೈಯ್ಯಲ್ಲಿಟ್ಟು,

"ಮಲ್ಲವ್ವಾ ನಿನಗೆ ಅನುಕೂಲ ಆದಾಗ ರೊಕ್ಕಾ ಕೊಡು. ನೀ ಇನ್ನ ಮನೆಗೆ ಹೋಗು" ಎಂದು ಹೇಳಿ, ಬಗ್ಗಿ ಪಾದ ಮುಟ್ಟಲು ಹವಣಿಸುತ್ತಿದ್ದ ಮಲ್ಲವ್ವನನ್ನು ಸರಿಸಿ ಶಕುಂತಲೆ ಕಣ್ಣು ಒರೆಸಿಕೊಳ್ಳುತ್ತ ಒಳಗೆ ಹೋಗಿಬಿಟ್ಟಳು.

●

# ‘ಅಪರಾಧಿ ನಾನಲ್ಲ’

ಅನಿರೀಕ್ಷಿತವಾಗಿ ನನ್ನ ತಂಗಿ ಶಕುಂತಲೆಯ ಗಂಡ ಅಜಿತನಿಂದ ಪತ್ರ ಬಂದಿತ್ತು. ‘ಸೋಮವಾರ ಮಹಾಲಕ್ಷ್ಮಿ ಎಕ್ಸ್‌ಪ್ರೆಸ್‌ಗೆ ಶಕೂ ಒಬ್ಬಳೇ ನಿಮ್ಮಲ್ಲಿಗೆ ಬರುತ್ತಿದ್ದಾಳೆ. ಸ್ಟೇಶನ್ನಿಗೆ ಯಾರಾದರೂ ಬಂದು ಕರೆದು ಕೊಂಡು ಹೋಗಬೇಕು’ ಎಂದು ಚುಟುಕಾಗಿತ್ತು ಆ ಕಾಗದ. ನನಗೆ ತುಂಬ ಸಂತೋಷವಾಯಿತು. ಅಂಜನಾ ಮದುವೆಯಾಗಿ ಹೋದ ಮೇಲೆ ನಾನೂ ಒಬ್ಬಳೇ ಆಗಿ ಮನೆ, ಕೆಲಸ, ಅಡಿಗೆ, ಊಟ ಎಂದು ಇಷ್ಟರಲ್ಲಿಯೇ ದಿನ ಕಳೆದು ಮನಸ್ಸಿಗೆ ತುಕ್ಕು ಹಿಡಿದಂತಾಗಿತ್ತು. ನಾಲ್ಕುದಿನ ರಜ ಹಾಕಿರಿ, ಎಲ್ಲರೂ ಕೂಡಿ ಊರು ಬಿಟ್ಟು ಹೋಗಿ ಮಜವಾಗಿ ಕಾಲಕಳೆದು ಬರೋಣ ವೆಂದರೆ ಇವರು ಬೇಡವನ್ನುವದಿಲ್ಲ ಎಂದು ಏನೇನೋ ಪ್ಲಾನ್ ಹಾಕತೊಡ ಗಿದೆ. ಮೈ, ಮನಸ್ಸು ಸಂತೋಷದಿಂದ ಉಬ್ಬಿ ಹಾರಾಡುತ್ತಿದ್ದೆ.

ಶಕೂ ತುಂಬಾ ಒಳ್ಳೆಯವಳು. ನನ್ನ ತಂಗಿ ಎಂದು ಹೊಗಳುವುದಿಲ್ಲ ನಿಜವಾಗಿಯೂ ಮೃದು ಮನಸ್ಸಿನ ಹುಡುಗಿ. ಪ್ರೀತಿ, ದಯೆ, ಕರುಣೆಯ ಅಂಶ ಹೆಚ್ಚಾಗಿ ಇದ್ದವಳು. ಚಿಕ್ಕಂದಿನಿಂದಲೂ ಯಾರಾದರೂ ಭಿಕ್ಷುಕರು ಬಂದರೆ ಮೊದಲು ಹೋಗಿ ತನ್ನ ಅರಿವೆ ಕೊಟ್ಟು ಅವ್ವನಿಂದ ಬೈಗುಳ, ಏಟು ತಿನ್ನುತ್ತಿದ್ದಳು. ಶಾಲೆಯಲ್ಲಿ ಬಡವರಿಗೆ ಪೆನ್ಸಿಲ್ ಪೆನ್ ಅವಶ್ಯಕತೆ ಬಿದ್ದರೆ ತನ್ನದನ್ನೇ ಕೊಟ್ಟು ಬರುತ್ತಿದ್ದಳು. ತನ್ನ ಪಾಕೆಟ್ ಮನಿ ಖರ್ಚು ಮಾಡದೆ ಕಾದಿರಿಸಿಕೊಂಡು ಫಂಡು ಎತ್ತಲು ಬಂದವರಿಗೆ ದಾನ ಮಾಡಿ ಬಿಡುತ್ತಿದ್ದಳು.

ನಮಗೆ ಸಾಕಷ್ಟು ಅನುಕೂಲತೆ ಇದ್ದಾಗ, ಇಲ್ಲದವರಿಗೆ ಕೊಟ್ಟರೆ ತಪ್ಪೇನಿಲ್ಲ. ಆದರೆ ಆ ದಾನ ಅಪಾತ್ರ ದಾನವಾಗಬಾರದು. ನಮ್ಮ ದಯೆಯು ದುರುಪಯೋಗ ಮಾಡಿಕೊಳ್ಳುವ ಜನರನ್ನು ನಂಬಬಾರದು ಎಂದು ನಾನಾಗಲೀ, ಅವ್ವನಾಗಲೀ ಹೇಳಿದಾಗ ನಕ್ಕುಬಿಡುತ್ತಿದ್ದಳು.

ನಾವಿಬ್ಬರೂ ಒಬ್ಬ ತಾಯಿಯ ಮಕ್ಕಳಾದರೂ ನಾನು ಶಕೂನಷ್ಟು ಭಾವುಕಳಲ್ಲ. ಬಡವರ ಬಗ್ಗೆ ನನಗೂ ಕರುಣೆ ಇದ್ದರೂ ಅವರಲ್ಲಿಯೂ ಠಕ್ಕರು ಇರುತ್ತಾರೆ ಎಂದುಕೊಂಡ ನಾನು ಬೇಗನೆ ನಂಬುವುದಿಲ್ಲ. ದುಃಖಿಗಳನ್ನು ಕಂಡರೆ ಕೂಡಲೆ ಕರಗುವದಿಲ್ಲ. ವಿಚಾರಮಾಡಿ, ನೋಡಿ, ಸಹಾಯ ಮಾಡುತ್ತೇನೆ.

ಶಕೂ ಮದುವೆಯಾಗಿ ತುಂಬ ಅನುಕೂಲಸ್ಥರ ಮನೆ ಸೇರಿದಳು. ದೇವರು ಅವಳ ದೊಡ್ಡ ಗುಣಕ್ಕೆ ತಕ್ಕ ಫಲ ಕೊಟ್ಟ ಎಂದು ಎಲ್ಲರೂ ಹಿಗ್ಗಿದೆವು. ಅಜಿತನಿಗೆ ಬಹಳಷ್ಟು ಆಸ್ತಿ ಇತ್ತು. ದೊಡ್ಡ ಉದ್ಯೋಗದಲ್ಲಿದ್ದ; ದೊಡ್ಡ ಮನೆ, ಆಳುಕಾಳು, ಕಾರು, ಕೈತುಂಬ ಹಣ. ಎಲ್ಲ ಇದ್ದಮೇಲೆ ಶಕೂ ಬಿಟ್ಟಾಳೆಯೇ ? ಎಲ್ಲರ ಕಷ್ಟಗಳಲ್ಲಿ ಭಾಗಿಯಾಗುವವಳೇ. ಅನಾಥರು, ದೀನರು, ದರಿದ್ರರನ್ನು ಕಂಡು ಮರುಕಪಡುವವಳೇ. ಸಮಾಜಕ್ಕೆ ತನ್ನಿಂದ ಸಾಧ್ಯವಾದಷ್ಟು ಸೇವೆ ಸಲ್ಲಲೆಂದು ಬೇರೆ ಬೇರೆ ಸಂಘ–ಸಂಸ್ಥೆಗಳಿಗೆಲ್ಲ ಸದಸ್ಯೆಯಾದಳು. ಹುರುಪಿನ ಕಾರ್ಯಕರ್ತೆಯಾದಳು. ತನ್ನ ಹೆಂಡತಿಯ ಒಳ್ಳೆಯ ಕೆಲಸಗಳಿಂದ, ಅವಳಿಗಿರುವ ಒಳ್ಳೆಯ ಹೆಸರಿನಿಂದ ಅಜಿತನೂ ಸಂತೋಷಪಡುತ್ತಿದ್ದ. ತುಂಬಾ ಕೆಲಸಗಳಿಂದ ದಣಿದ ತಂಗಿ ಗಂಡ–ಮಕ್ಕಳನ್ನು ಬಿಟ್ಟು ಬೇಸರ ಕಳೆಯಲು ನಮ್ಮಲ್ಲಿ ಬರುತ್ತಿದ್ದಾಳೆಂದು ನಾನು ತಿಳಿದುಕೊಂಡೆ.

ಶಕೂನನ್ನು ಕರೆಯಲು ನಾನೇ ಸ್ಟೇಷನ್ನಿಗೆ ಹೋದೆ. ಅವಳು ಗಾಡಿಯಿಂದಿಳಿದು ಬರುವದನ್ನು ನೋಡಿದ ಕೂಡಲೇ ನನ್ನ ಸಂತೋಷ, ಉತ್ಸಾಹವೆಲ್ಲ ಸೂಜಿಚುಚ್ಚಿದ ಬಲೂನಿನಂತೆ ಠುಸ್ಸೆಂದು ಹೋಯಿತು. ಇವಳು ಶಕುಂತಲೆಯೇ ? ಇದೇನು ಹೀಗಾಗಿಬಿಟ್ಟಿದ್ದಾಳಲ್ಲ. ಬಣ್ಣ ತುಂಬಿ ರಸಭರಿತವಾದ ಸೇಬಿನಂತೆ ಇದ್ದವಳು ಸುಟ್ಟ ಬದನೆಕಾಯಿ ಆಗಿದ್ದಾಳಲ್ಲ! ಅವಸರದಿಂದ ಮುಂದೆ ಹೋಗಿ ಅವಳ ಕೈ ಹಿಡಿದುಕೊಂಡೆ. ಆಶ್ಚರ್ಯ ವೇದನೆ ಕೂಡಿದ ನನ್ನ ಕಣ್ಣುಗಳನ್ನು ನೋಡುತ್ತಾ,

"ಆರಾಮ ಅದಿಯಾ ಅಕ್ಕಾ ?" ಎಂದು ಒಣನಗೆ ನಕ್ಕಳು.

"ಹೂಂ ಅದೀನಿ. ಆದರ ನಿನಗ ಏನಾಗೇದ" ಎಂದೆ ಟಾಕ್ಸಿ ಹತ್ತುತ್ತ.

"ಮನಿಗೆ ನಡೀ ಹೇಳ್ತೀನಿ" ಎಂದು ಅತ್ತ ಮುಖ ತಿರುಗಿಸಿದಳು.

ಅಷ್ಟೊಂದು ಕಷ್ಟಪಟ್ಟು ತಯಾರಿಸಿದ ಅಡಿಗೆಯಲ್ಲಿ ಕಾಲು ಭಾಗವೂ ಸರಿಯಲಿಲ್ಲ. ತಾಟಿನಲ್ಲಿ ಕೈಯಾಡಿಸಿ ಹಾಗೇ ಬಿಟ್ಟಳು. ಕೇಳಿದರೆ ಹಸಿವೆಯೇ ಇಲ್ಲವೆಂದಳು. ಹುಡುಗರು ಕಾಲೇಜಿಗೆ, ಅವರು ಆಪೀಸಿಗೆ ಹೊರಟಾದ ಮೇಲೆ ನಾವಿಬ್ಬರೇ ಹಾಸಿಗೆಯಲ್ಲಿ ಹೊರಳಿದೆವು. ಮುಂಜಾನೆಯಿಂದ ಮನಸ್ಸಿನಲ್ಲಿಯೇ ಕಟೆಯುತ್ತಿದ್ದ ಪ್ರಶ್ನೆಗೆ ಉತ್ತರ ದೊರಕಿತ್ತು. ಶಕೂನ ಆರೋಗ್ಯ ಸರಿಯಿಲ್ಲ. ಯಾವದೋ ಭಯಂಕರ ಜಡ್ಡು ಆಗೇದ. ಹಸಿವೀನೇ ಇಲ್ಲಾ ಅಂದರೆ ಕಾಮಣಿ ಆಗಿದೆಯೋ ಅಥವಾ ಹೊಟ್ಟೆಯೊಳಗೇ ಏನಾದರೂ ಅಂದರೆ ಕ್ಯಾನ್ಸರ ನಂಥಾದ್ದು ...ಛೇ... ಅದೇನು ಆಗಿರಲಿಕ್ಕಿಲ್ಲ. ಸಾಧ್ಯವಿದ್ದಷ್ಟು ಬೇಗ ನಮ್ಮ ಫ್ಯಾಮಿಲಿ ಡಾಕ್ಟರರಿಗೆ ತೋರಿಸಬೇಕು. ಅಜಿತ ಇಷ್ಟು ದಿನಾ ಯಾಕ ಅಲಕ್ಷ ಮಾಡಿದರು... ತಿಳಿಯದೆ ಹೋದೆ. ನನ್ನ ಯೋಚನೆಗಳನ್ನು ಬದಿಗೊತ್ತಿ,

"ಶಕೂ ಇವತ್ತ ಡಾ॥ ಜೋಶಿಯವರ ಕಡೆ ಹೋಗೋಣು".

"ಅಕ್ಕಾ ನನಗೇನೂ ಜಡ್ಡಾಗಿಲ್ಲ, ಆಜೀತ ಎಲ್ಲಾ ಡಾಕ್ಟರರಿಗೆ, ಸ್ಪೆಷಲಿಸ್ಟರಿಗೆ ತೋರಿಸಿದರು. ಎಲ್ಲಾ ನಾರ್ಮಲ್ ಆದ, ಏನೂ ಜಡ್ಡಾಗಿಲ್ಲ ಅಂತಾರ".

"ಮತ್ತ ಯಾಕಿಷ್ಟು ಸೊರಗೀದಿ? ಹಸಿವು ಇಲ್ಲಾ ಅಂತ ಊಟಾನೂ ಮಾಡಲಿಲ್ಲಾ. ಜಡ್ಡು ಇಲ್ಲಾ ಅಂದರ ನನಗ ನಂಬಲಿಕ್ಕೆ ಆಗೂದಿಲ್ಲ ನೋಡು."

"ಇದು ಶರೀರಕ್ಕ ಆದ ಜಡ್ಡು ಅಲ್ಲ ಅಕ್ಕಾ, ಮನಸ್ಸಿಗೆ ಆಗೇದ. ತಾನು ತಪ್ಪು ಮಾಡದಿದ್ದರೂ ಮಂದಿ ದೃಷ್ಟಿಯೊಳಗ ಅಪರಾಧಿ ಆದೆ. ಅದs ನನ್ನ ಕೊರೀತದ. ಮಂದೀ ರೊಕ್ಕಾ ತಿಂದು ಗಂಟು ಮಾಡಿಕೊಳ್ಳಲಿಕ್ಕೆ ನಾನು ಸಮಾಜದ ಅಧ್ಯಕ್ಷೆ ಆದೆ ಅಂತಾರ ಅಕ್ಕಾs, ಈ ಅಪವಾದಾನ ಹ್ಯಾಂಗ ಸಹಿಸಲಿ ?"

ಕಂಠ ತುಂಬಿ ಬಂದಿದ್ದ ಶಕೂ ಎದ್ದು ಕುಳಿತು ಭೋರೆಂದು ಅಳಹತ್ತಿದ್ದಳು. ದುಃಖದಿಂದ ಅವಳ ಶರೀರ ನಡುಗುತ್ತಿತ್ತು. ಸಣ್ಣ ಕೂಸಿನಂತೆ

ಶಕೂನನ್ನು ನಾನು ಅಪ್ಪಿಕೊಂಡು ನನ್ನ ಹೆಗಲಮೇಲೆ ಅವಳ ತಲೆಯನ್ನಿರಿಸಿ ನೇವರಿಸುತ್ತ, ಸಮಾಧಾನ ಮಾಡ ತೊಡಗಿದೆ. ನನ್ನ ಕಣ್ಣು ತುಂಬಿ ಹರಿದ ನೀರು ಅವಳ ಕೂದಲನ್ನು ನೆನೆಸುತ್ತಿತ್ತು. ಮೊದಲಿನ ಭಾವೋದ್ವೇಗದ ಕ್ಷಣ ಗಳುಸರಿದು ಹೋದಮೇಲೆ ಶಕೂ 'ಅಕ್ಕ' ಎಂದಾಗ ಅವಳು ದನಿಯಲ್ಲಿ ಸ್ಥಿರತೆಯಿತ್ತು.

ಅವಳನ್ನು ದಿಂಬಿಗೆ ಆನಿಸಿ ಕೂಡ್ರಿಸಿ, ಅವಳ ಕೈಯ್ಯನ್ನು ಹಿಡಿದು ಕೊಂಡು "ಶಕೂ, ಏನೇನಾಯಿತು ಎಲ್ಲಾ ಈಗ ಹೇಳು. ಮನಸ್ಸಿನೊಳಗ ಏನೂ ಇಟ್ಟುಕೋಬೇಡ, ಎಲ್ಲಾ ಹೇಳು. ನಿನ್ನ ಎದಿಭಾರ ಸ್ವಲ್ಪಾದರೂ ಕಡಿಮಿ ಆಗಲಿ" ಅಂದೆ ಕಕ್ಕುಲಾತಿಯಿಂದ.

"ಅಕ್ಕಾಃ ನನ್ನ ಓರಗಿತ್ತಿ ವಿಮಲಾನ ತಮ್ಮ, ತಮ್ಮನ ಹೆಂಡತೀನ್ನ ನೀ ನೋಡಿಯಲ್ಲ?"

"ಹೂಂ, ಭೀಮಣ್ಣ-ಅಂಬಕ್ಕ ಹೌದಲ್ಲೋ? ಭೀಮಣ್ಣ ಯಾವುದೋ ಮಿಲ್ಲಿನೊಳಗೆ ಗುಮಾಸ್ತ ಇದ್ದಾನ. ಮಕ್ಕಳು ಭಾಳ ಅದಾವ ಅಂತ ಹೇಳಿದ್ದಿ ನೀನು. ನೆನಪು ಅವ ನನಗ."

"ಹೌದಕ್ಕಾ ಅವರಃ. ಅಂಬಕ್ಕ ಬಡವಿ, ಗಂಡನ ಪಗಾರ ಸಣ್ಣದು. ಐದು ಮಕ್ಕಳು, ದೊಡ್ಡ ಊರಾಗ ಖರ್ಚು ಹ್ಯಾಂಗ ನಡೀಬೇಕು. ನಮ್ಮ ಮನೀಗೆ ಸಹಾಯಕ್ಕ ಅಂತ ಬಂದಾಗೆಲ್ಲಾ ಹುಡುಗರಿಗೆ ಅರಿವಿ-ಅಂಚಡಿ ಫೀ-ಪುಸ್ತಕ, ಆಕೀಗೆ ಸೀರಿ-ಖಣಾ ಏನರೆ ಕೊಟ್ಟು ಕಳಸತಿದ್ದೆ. ಅಂಬಕ್ಕ ಅರಿವಿ ಹೊಲಿದು ಒಂದಿಷ್ಟು ಗಳಸತಿದ್ಲು."

"ಸರಕಾರದ ಸಹಾಯದಿಂದ ನೀನು ಆಕೀಗೆ ಹೊಲಿಗಿ ಮಶೀನು ಕೊಡಿಸಿದ್ದಿ ಅಲ್ಲಾ? ವಿಮಲಾಗ ನಿನ್ನ ಕಂಡರ ಆಗೂದಿಲ್ಲ. ಉರದು ಬೀಳತಾಳ, ಸೇರಿಕಿ ಇಲ್ಲಾ, ನೀ ಯಾಕ ಆಕೀ ತಮ್ಮಗ ಇಷ್ಟು ಕರುಣಾ ತೋರಸ್ತೀ?"

"ಭೀಮಣ್ಣ ಬಡವ ಅಂತ ವಿಮಲಾ ಅವರ್ನ ಸೇರೂದಿಲ್ಲಾ. ತಮ್ಮಾ ಅಂತ ಹೇಳಲಿಕ್ಕೂ ಅವಳಿಗೆ ನಾಚಿಕೆ ಬರ್ತದಂತ. ಭೀಮಣ್ಣ ಇಸ್ಪೇಟು

ಚಟಕ್ಕ ಬಿದ್ದು ಆಸ್ತಿ ಎಲ್ಲಾ ಹಾಳಮಾಡ್ಯಾನ ಅಂತ ಬಯ್ತಾಳ. ಆದರ ಅಂಬಕ್ಕ ಆ ಸಣ್ಣ ಮಕ್ಕಳು ಏನ ಪಾಪಾ ಮಾಡ್ಯಾರ ಹೇಳು, ಕಷ್ಟದಾಗ ಇದ್ದಾಗ ನನ್ನಿಂದ ಆದಷ್ಟು ಸಹಾಯ ಮಾಡ್ತೀನಿ. ನಮ್ಮ ಮನೀಗೆ ಬರ್‍ತಾ ಇರು ಅಂತ ನಾನs ಅಂಬಕ್ಕಗ ಹೇಳಿದ್ದೆ."

"ಆಕೀ ಮಗಾ ಶಾಣ್ಯಾ ಅದಾನ, ಮುಂದೆ ಓದಲಿ ಅಂತ ನೀನs ಕಾಲೇಜಿನಾಗ ಸೀಟು ಕೊಡಿಸಿ, ಪುಸ್ತಕ-ಫೀಜು ಕೊಟ್ಟದ್ದು ನನಗ ಗೊತ್ತದ."

"ಹೌದಕ್ಕಾ, ಆಗಿನಿಂದ ಅಂಬಕ್ಕ ನನ್ನ ಭಾಳ ಹಚ್ಚಿಕೊಂಡು ಬಿಟ್ಟು, ನೀವs ನನ್ನ ಪಾಲಿನ ದೇವರು ಅಂತ ಹೇಳತಿದ್ಲು. ಮಗಾ ಕಲತು ನೌಕರಿ ಹಿಡದಾ ಅಂದರ ಮುಂದ ತನಗ ಅಷ್ಟ ತ್ರಾಸ ಆಗೂದಿಲ್ಲಾ ಅಂತಿದ್ಲು."

"ಹೌದು, ಅದೆಲ್ಲಾ ಖರೇ, ಆದರ ಮುಂದೇನಾತು ಹೇಳು. ಈಗ ನಿನಗ ತ್ರಾಸ ಆಗಿದ್ದು ಅವರಿಂದನ ಕಾಣತದ."

"ಸಿಟ್ಟಾಗ ಬ್ಯಾಡಕ್ಕ. ಅಂಬಕ್ಕನ್ನ ಅಷ್ಟು ಹಚಿಗೊಂಡದ್ದು ತಪ್ಪಾತು ಅಂತ ಈಗ ಅನಸತದ. ಅಂಬಕ್ಕ ಈಗ ನಾಲ್ಕು ತಿಂಗಳ ಹಿಂದ ಬಂದಳು. ಆಗಲೇ ಎಂಟು ತಿಂಗಳು ಬಸರ ಇದ್ದಳು. ಅಶಕ್ತ ಹೆಂಗಸು, ಮಾರಿ ಬಿಳಚಿಕೊಂಡು ಹಿಂಡಿದ ಅರಿವಿ ಹಾಂಗ ಆಗಿದ್ಲು. ಗಂಡನ ಇಸ್ಪೇಟ ಚಟಾ ಬಹಾಳ ಆಗೇದ, ಮನೀ ಖರ್ಚಿಗೆ ರೊಕ್ಕ ಇಲ್ಲಾ ಅಂತಾರ, ಅವರ ಕೈಯಾಗ ಏನೂ ಉಳೀದ್ಹಾಂಗ ಆಗೇದ, ಅಂತ ಹೇಳಿ ಅತ್ತಳು. ನನಗ ಭಾಳ ಕೆಟ್ಟ ಅನ್ನಿಸ್ತು. ಭೀಮಣ್ಣಗ ಈಗ ಯಾರ ಬುದ್ಧಿವಾದಾನೂ ನಾಟೂದಿಲ್ಲ ಏನ ಮಾಡೂದು ಅಂದೆ. ನನ್ನ ಹಣೇಬರದಾಗ ಇದ್ಹಾಂಗ ಆಗತದ. ನೀವೇನು ಮಾಡತೀರಿ, ಅವರ ಅನುವು- ಆಪತ್ತಿಗೆ ಇರಲಿ ಅಂತ ನನ್ನ ಮನ್ಯಾಗಿನ ಚೂರು ಬಂಗಾರ ಎಲ್ಲಾ ಕೊಡಿಸಿ ತೊಗೊಂಡು ಬಂದೇನಿ. ನಿಮ್ಮ ಹತ್ತಿರ ಇಟಕೊಳ್ರಿ, ಮುಂದ ಬೇಡಿದಾಗ ಕೊಡೀರಂತ, ಅಂತ ಹೇಳಿ ಒಂದು ಸಣ್ಣ ಗಂಟು ಕೊಟ್ಟಳು. ಆಕೀ ಮುಂದ ಬಿಚ್ಚಿನೋಡಿದೆ. ಒಂದು ತೊಲಿ ಚೈನು, ಮುರುವು, ಬುಗುಡಿ, ಬೆಂಡೋಲಿ, ಎಂಟ್ಹತ್ತು ಬಂಗಾರದ ಗುಂಡು, ಬೆಳ್ಳಿ ಚೈನು, ಹಾಲಗಡಗ ಇದ್ದವು. ಅವನ್ನೆಲ್ಲಾ ಹಾಂಗs ಕಟ್ಟಿ, ಬೇಕಾದಾಗ

ತೊಗೊಂಡು ಹೋಗ್ರಿ ಅಂತ ಸೇಫಿನ್ಯಾಗ ಇಟ್ಟೆ. ಟಾನಿಕ್, ಹಣ್ಣು-ಹಾಲು ತೋಗೋ ಅಂತ ಐವತ್ತು ರೂಪಾಯಿ ಆಕೀ ಕೈಯ್ಯಾಗ ಇಟ್ಟೆ. ಈ ಸಾರೆ ಹೆರಿಗಿಯೊಳಗ ನಾನು ಉಳೀತೆನೋ ಇಲ್ಲೊ ಅಂತ ಕಣ್ಣೀರು ಹಾಕಿ ನಮಸ್ಕಾರಾ ಮಾಡಿ ಅಂಬಕ್ಕ ಹೋದ್ಲು."

ಇಲ್ಲಿಯುವರೆಗಂತೂ ಯಾವ ತಪ್ಪೂ ಮಾಡಿರದ ತಂಗಿ ಯನ್ನು ಹೆಮ್ಮೆಯಿಂದ ನೋಡುತ್ತಾ ಕೇಳಿದೆ "ಹೂಂ ಮುಂದ?"

"ಮುಂದ ಒಂದು ತಿಂಗಳಾಗಿತ್ತು, ಭೀಮಣ್ಣ ಬಂದ. 'ಆಕೀ ಹಡದಾಳ್ರಿ. ಭಾಳ ತ್ರಾಸಾತು. ಆಕಿ ಉಳದದ್ದು ದೊಡ್ಡ ಮಾತು. ಡಾಕ್ಟರರ ಫೀಸು ಭಾಳ ಆಗೇದ, ಮನೀ ಖರ್ಚು ನಡೀಬೇಕಾಗೇದ, ನಿಮ್ಮ ಹತ್ತರ ಇಡಾಕ ಗಂಟು ಕೊಟ್ಟಿದ್ದಲ್ಲ ಇಸಕೊಂಡು ಬಾ ಅಂದಾಳ' ಅಂತ ಹೇಳಿದ."

"ನೀ ಕೊಟ್ಟು ಬಿಟ್ಟೆ ಹೌದಲ್ಲೋ?"

"ಹೌದಕ್ಕಾ, ಅದs ನಾ ಮಾಡಿದ ತಪ್ಪು. ಹೆಂಡತಿ ಇಟ್ಟ ಹೋಗ್ಯಾಳ, ಆಕಿ ಇಷ್ಟ ಲಗೂ ಅಡ್ಡಾಡೂ ಹಾಂಗಿಲ್ಲ, ಗಂಡ ಬೇಡಾಕ ಬಂದರ ಇದರೊಳಗೆ ಮೋಸ ಅದ ಕೊಡಬಾರದು ಅನ್ನೂದು ನನಗೆ ತಿಳೀಲೇ ಇಲ್ಲಾ ಕೊಟ್ಟೆ. ಮೂರು ತಿಂಗಳ ಮ್ಯಾಲೆ ಅಂಬಕ್ಕ ಕೂಸಿನ್ನ ಎತ್ತಿಕೊಂಡು ಬಂದ್ಲು. 'ನನ್ನ ಮಗಳು ಕಾಶಿ, ದೊಡ್ಡಾಕಿ ಆಗ್ಯಾಳ ಶೇಕಕ್ಕ, ಒಂದಿಷ್ಟ ಗಂಟು ಕೊಡ್ರಿ. ಮೂಗು ಬೊಟ್ಟು, ಬೆಂಡೋಲಿ ಒಯ್ದು ಹಾಕಿ ಆರತಿ ಮಾಡತೀನಿ' ಅಂದಳು. ನನ್ನ ಎದಿ ಧಸಕ್ಕಂತು, ಮುಖ ಕರ್‍ರಗಾತು. 'ಭೀಮಣ್ಣ ಒಯ್ದು ಭಾಳ ದಿನಾ ಆಯ್ತು ಅಂಬಕ್ಕಾ' ಅಂದೆ. 'ಘಾತಾ ಮಾಡಿದ್ರಿ ನೀವು, ನನ್ನ ಬಂಗಾರಎಲ್ಲಾ ಹಾಳಾಗಿಹೋತು. ಅವರು ಒಯ್ದು ಮಾರಿ ಇಸ್ಪೇಟು ಆಡತಾರ ಅಂತ ನಿಮ್ಮ ಕೈಯಾಗ ಕೊಟ್ಟಿದ್ದೆ. ನನ್ನ ಕೊಂದ್ರಿ ನೀವು' ಅಂತ ಗಳಾಗಳಾ ಅಳಕೋತ ಕೂಸಿನ್ನ ಎತ್ತಿಕೊಂಡು ಹೋಗಿ ಬಿಟ್ಟಳು. ನಾ ಎಷ್ಟು ಕರೆದೆ. ಆದರೂ ಬರಲಿಲ್ಲಾ, ನನ್ನ ಮನಸ್ಸು ವಿಲಿವಿಲಿ ಒದ್ದಾಡಿತು– ಬಡಿವಿ ಬಂಗಾರ ಮುಳುಗಿಹೋತಲ್ಲ ಅಂತ"

"ಬಂಗಾರ ಕಳದಾವಾ ಆಕೀ ಗಂಡ, ನೀ ಎಷ್ಟೋ ರೀತಿಯಿಂದ ಆಕೀಗೆ ಸಹಾಯಾ ಮಾಡಿದ್ದಿ. ಮುಂದೂ ಮಾಡತಿದ್ದಿ, ಅದನ್ನ ಯಾಕ ಇಷ್ಟ ಮನಸ್ಸಿಗೆ ಹಚ್ಚಿ ಕೊಂಡಿ?" ಶಕೂನನ್ನು ಸಾಂತ್ವನಪಡಿಸಲು ನಾನು ಹೇಳಿದೆ.

ಶಕೂ ಮಾತನಾಡದೆ ಮುಖ ಮುಚ್ಚಿಕೊಂಡು ಮತ್ತೆ ಅಳತೊಡಗಿದಳು. ನೀರು ತುಂಬಿದ ಕಣ್ಣುಗಳಿಂದ ನನ್ನನ್ನು ನೋಡುತ್ತ "ವಿಮಲಾ ಭೀಮಣ್ಣನ್ನ ಕರೆದು ಕೇಳಿದ್ಲಂತ. ಶೇಕಕ್ಕ ನನಗ ಯಾವ ಗಂಟೂ ಕೊಟ್ಟಿಲ್ಲಾ ನನಗೇನೂ ಗೊತ್ತಿಲ್ಲಾ ಅಂತ ಅವನು ಹೇಳಿದ್ನಂತ ವಿಮಲಾ ಎಲ್ಲಾರ ಮುಂದ ಹೇಳ್ತಾಳಂತ. ನಮ್ಮ ಶಕುಂತಲಾ ಕಾರಿನ್ಯಾಗ ಅಡ್ಡಾಡತಾಳಂತ ಆಕೆ ದೊಡ್ಡ ಮನುಷ್ಯಳು ಅಂತ ನೀವು ತಿಳಿದಿರಬೇಕು. ಸಮಾಜ ಸೇವಾ, ಫಂಡು, ದಾನ ಅದು-ಇದು ಅಂತ ಓಡಾಡಿ ಮಂದಿ ರೊಕ್ಕಾ ಎತ್ತಿಹಾಕಿ ಆಕಿ ದೊಡ್ಡಾಕಿ ಆಗ್ಯಾಳ ಅನ್ನೂದು ನಿಮಗ ಗೊತ್ತಿಲ್ಲ ಅಂತಾಳಂತ. ಅಕ್ಕಾ ನನಗ ಮಂದ್ಯಾಗ ಮಾರೀ ತೋರಸದಾಂಗ ಆಗೇದ. ಇದು ಸುಳ್ಳು ಅಂತ ಮಂದೀನ್ನ ಹ್ಯಾಂಗ ನಂಬಿಸಲಿ?"

ಬಡವರನ್ನು ಕಂಡರೆ ಕರಗುವ, ಮರುಗುವ, ಮೃದು ಸ್ವಭಾವದ ನನ್ನ ಶಕೂಗೆ ಈ ಅಪವಾದದಿಂದ ಹೃದಯ ಒಡೆದುಹೋಗಿತ್ತು. ಅವಳ ಕಣ್ಣೀರು ಒರೆಸಿ, ತಲೆ ನೇವರಿಸಿ, ಕಣ್ಣಲ್ಲಿ ಕಣ್ಣಿಟ್ಟು ಕೇಳಿದೆ.

"ಶಕೂ, ನೀ ಖರೇನ ಭೀಮಣ್ಣಗ ಆ ಗಂಟು ಕೊಟ್ಟೀಯಲ್ಲಾ?"

"ಏನಕ್ಕಾ ನಿನಗೂ ನನ್ನ ಮಾತಿನ್ಯಾಗ ನಂಬಿಕೆ ಇಲ್ಲೇನು?" ಕಣ್ಣೀರು ಮತ್ತೆ ಧುಮುಕುವುದರಲ್ಲಿತ್ತು. "ಆದರ ನಾನು ಮನೀಗೆ ಹೋಗಿ ಅಂಬಕ್ಕನ ಕೈಯ್ಯಾಗ ಆ ಗಂಟು ಕೊಡಬೇಕಾಗಿತ್ತು. ಇಲ್ಲಾ, ಯಾರಾದರೂ ಮೂರನೆಯವರ ಮುಂದ ಕೊಟ್ಟಿದ್ದರೂ ಅವರು ಸಾಕ್ಷಿ ಹೇಳುತ್ತಿದ್ದರು. ನಾ ಗಂಟು ಕೊಟ್ಟಾಗ ನಾವಿಬ್ಬರೇ ಇದ್ದಿವಿ. ಅದು ನಾ ಮಾಡಿದ ತಪ್ಪು."

"ಮೂರನೆಯವರೊಬ್ಬರು ಇದ್ದರು, ಶಕೂ ನೀ ಅದನ್ನ ಮರತೀ, ನನ್ನ ಮಾತು ನಂಬು. ನಾ ಹೇಳೋದು ಕೇಳು. ನೀ ಗಂಟು ಕೊಡೂ ಮುಂದ ನಿನ್ನ ಮನಃಸಾಕ್ಷಿ ಇತ್ತು. ಪ್ರತಿಯೊಬ್ಬ ಮನುಷ್ಯನೊಳಗೂ ಈ ಮನ

ಸ್ವಾಕ್ಷಿ ಇರತದ. ನಾವು ಮಾಡುವ ಒಳ್ಳೆಯ ಮತ್ತು ಕೆಟ್ಟ ಕೆಲಸಗಳಿಗೂ ಇದು ಸಾಕ್ಷಿ ಆಗಿರತದ. ನೀನು ಗಂಟು ನುಂಗಿಲ್ಲಾ, ಕೊಟ್ಟೇದಿ, ನಿನ್ನ ತಪ್ಪಿಲಾ ಅಂತ ಅದು ಹೇಳತದ. ಅದಕ್ಕ ಕಿವಿಕೊಡು. ಅದಕ್ಕs ಮಹತ್ವ ಕೊಡು. ಜನರು ಅನ್ನೂದಕ್ಕ ಆಡೂದಕ್ಕ ಲಕ್ಷ್ಯ ಕೊಡಬ್ಯಾಡಾ. ನಿನ್ನನ್ನ ಒಳ್ಳೇ ದಾರೀಯೊಳಗೆ ನಡೆಸೂ ಮನಃಸಾಕ್ಷಿಗೆ ಶರಣಾಗು, ಅದು ಹೇಳಿದಾಂಗ ಕೇಳು. ನಿನ್ನ ಮನಸ್ಸಿಗೆ ಶಾಂತಿನೂ ಸಿಗ್ತದ, ನಿನ್ನ ಆರೋಗ್ಯಾ ಸುಧಾರಿಸ್ತದ".

ನನ್ನ ತೊಡೆಯ ಮೇಲೆ ತಲೆ ಇಟ್ಟು ಮಗುವಿನಂತೆ ಮಲಗಿದ ಶಕುಂತಲೆಯ ತಲೆಗೂದಲಲ್ಲಿ ಬೆರಳಾಡಿಸುತ್ತ ಮತ್ತೆ ಮತ್ತೆ ಇವೇ ಮಾತುಗಳನ್ನು ನಿಧಾನವಾಗಿ ಹೇಳತೊಡಗಿದೆ. ಯಾವದೋ ಮೋಡಿಗೆ ಒಳಗಾದವಳಂತೆ ಶಕೂನ ಕಣ್ಣ ರೆಪ್ಪೆಗಳು ಭಾರವಾಗಿ ಮುಚ್ಚಿಕೊಂಡವು.

# ಬಾರಕೋಲು

"ಚಿನ್ನವ್ವಾss, ಏ ಚಿನ್ನೂ, ನೀರಿಗೆ ಬರತೀಯೇನ" ಪಂಚಮಿ ಹಬ್ಬಕ್ಕೆ ತವರಿಗೆ ಬಂದ ನಾಗವ್ವ ಎರಡೂ ಕೊಡ ಹಿಡಿದುಕೊಂಡು ತಲೆ ಬಾಗಿಲ ಹತ್ತಿರ ನಿಂತು ಕರೆಯುತ್ತಿದ್ದಳು. ಪಡಸಾಲೆಯ ಕಸ ಉಡು ಗುತ್ತಿದ್ದ ಚಿನ್ನವ್ವ ಕಟ್ಟೆಗೆ ಕುಳಿತು ತಲೆ ಬಾಚಿಕೊಳ್ಳುತ್ತಿದ್ದ ಮಾದವ್ವನತ್ತ ನೋಡಿದಳು. ಅತ್ತೆ ಒಪ್ಪಿದರಲ್ಲವೇ ಅವಳು ಗೆಳತಿಯೊಡನೆ ನೀರಿಗೆ ಹೋಗು ವದು.

"ನೀ ಹೋಗಿ ಬಾರವ್ವ, ಆಕೆಗಿನ್ನೂ ಕೆಲಸ ಭಾಳ ಅದಾವ" ಮಾದವ್ವ ಕುಳಿತಲ್ಲಿಂದಲೇ ಕೂಗಿ ಹೇಳಿ ಸೊಸೆಯತ್ತ ಕೆಂಗಣ್ಣು ಬೀರಿದಳು. ಉಸಿರು ಬಿಟ್ಟು ಚಿನ್ನವ್ವ ಮತ್ತೆ ಕಸಬರಿಗೆ ಎತ್ತಿಕೊಂಡಳು.

ನಾಗವ್ವ ಪುಣ್ಯವಂತೆ, ಕೊಟ್ಟ ಮನೆಯಲ್ಲಿ ಹೊಟ್ಟೆ ಬಟ್ಟೆಗೆ ಚಾಟಿ ಎನ್ನುವಷ್ಟು ಬಡತನ. ಹೊಲಕ್ಕೆ ದುಡಿಯಲು ಹೋದಾಗ ಹೊಟ್ಟೆ ತುಂಬ ಊಟ, ಆದರೂ ಅವಳ ಅತ್ತೆ ನಾಗರಪಂಚಮಿಗೆ ತವರಿಗೆ ಕಳಿ ಸಿದ್ದಾಳೆ. ಚಿನ್ನವ್ವನಿಗೆ ಇದ್ದೂರಲ್ಲಿಯೇ ತವರು ಮನೆ ಇದೆ. ಆದರೆ ಹಬ್ಬ ಮಾಡುವ ಸಂತೋಷವಿಲ್ಲ. ಎರಡು ವರುಷಗಳಿಂದ ಅಪ್ಪನ ಮನೆಯ ಓಣಿಗೆ ಕಾಲು ಹಾಕಲು ಅತ್ತೆ ಬಿಟ್ಟಿಲ್ಲ. ಇವಳು ಅಲ್ಲಿಗೆ ಹೋಗಬಾರದು ಎನ್ನುವದಷ್ಟೇ ಅಲ್ಲ, ಅವರಲ್ಲಿ ಯಾರೂ ಕೊನೆಗೆ ಸಣ್ಣ ತಮ್ಮ-ತಂಗಿಯರೂ ಇಲ್ಲಿಗೆ ಬರಬಾರದು, ಅವರೊಡನೆ ಯಾವ ಸಂಪರ್ಕವನ್ನೂ ಇಟ್ಟುಕೊಳ್ಳಬಾ ರದು ಎನ್ನುವದು ಮಾದವ್ವನ ಕಟ್ಟಪ್ಪಣೆ. ಚರಿಗೆ ತೆಗೆದುಕೊಂಡು ಹೋದಾಗ, ನೀರಿಗೆ ಹೋದಾಗ ಚಿನ್ನವ್ವ ತವರಿನವರನ್ನು ಕಂಡರೂ ಹೊರಳಿ ನೋಡು ವಂತಿಲ್ಲ. ಆಕಸ್ಮಾತ್ ತಾಯಿಯ ಭೆಟ್ಟಿ, ತಮ್ಮನೊಡನೆ ಮಾತು ನಡೆದದ್ದು ಗೊತ್ತಾದರೆ ಸಾಕು, ಮಾದವ್ವನಿಂದ ಸೊಸೆಗೆ ಹೊಡೆತ, ಒದೆತಗಳು ಬೀಳುವದಂತೂ ನಿಶ್ಚಿತ. ಇಂಥ ಕಹಿ ಅನುಭವದಿಂದ ಚಿನ್ನವ್ವ ಅತ್ತೆಯ ಮನೆಯ ಬಂಗಾರದ ಪಂಜರದ ಪಕ್ಷಿ ಆಗಿದ್ದಳು. ಸಣ್ಣ ವಯಸ್ಸಿನ ಅವಳ

ಕೋಮಲ ಮನಸ್ಸು ತವರಿನ ಅಂತಃಕರಣದ ಜೀವಗಳಿಗೆ ಹಾತೊರೆಯುತ್ತಿದ್ದಂತೆ ಮಾದವ್ವನ ಕೆಂಗಣ್ಣು, ಬಿರುನುಡಿಗಳಿಗೆ ಥರಥರ ನಡುಗುತ್ತಿತ್ತು.

ಅತ್ತೆ ಮಾದವ್ವ ಆ ಮನೆಯ ಸೊಸೆಯಾಗಿ ಬಂದಾಗ ಅವಳ ಅತ್ತೆ ಸಂಕ್ರವ್ವ ಇನ್ನೂ ಜೀವಂತವಿದ್ದಳು. ಬಡವರ ಮನೆಯ ಕಪ್ಪು ಹುಡುಗಿ ಮಾದವ್ವನನ್ನು ಕಂಡರೆ ಸಂಕ್ರವ್ವನಿಗೆ ಒಂದು ಥರಾ ತಿರಸ್ಕಾರ, ಅಸಹ್ಯ. ಅವಳ ಎಲ್ಲ ಕೆಲಸಗಳು, ಪ್ರತಿ ಮಾತೂ ಸಂಕ್ರವ್ವನಿಗೆ ಸೇರುತ್ತಿರಲಿಲ್ಲ. ಬೈಗುಳಗಳಿಂದಲೇ ಬೆಳಗಾಗುವದು, ರಾತ್ರಿಯಾಗುವದು ಮಾದವ್ವನಿಗೂ ರೂಢಿಯಾಗಿ ಹೋಗಿತ್ತು. ಆರೆಂಟು ವರುಷ ಕಳೆದರೂ ಮಾದವ್ವನಿಗೆ ಮಕ್ಕಳಾಗದಿದ್ದಾಗ ಅವಳನ್ನು ಸಂಕ್ರವ್ವ ಹೊಡೆದು ಸೇಡು ತೀರಿಸಿಕೊಳ್ಳುತ್ತಿದ್ದಳು. ಒಂದು ಸಣ್ಣ ತಪ್ಪಿಗೂ ಮಾದವ್ವ ಒದೆತ ತಿನ್ನುತಿದ್ದಳು.

ಒಮ್ಮೆ ಕುಡಿಯುವ ನೀರಿನ ಮಣ್ಣಿನ ಹರವಿ ಮಾದವ್ವನ ಕೈಯಿಂದ ಜಾರಿ ಬಿದ್ದು ಒಡೆದಿತ್ತು. ಅಷ್ಟಕ್ಕೇ ಸಂಕ್ರವ್ವ ಅವಳನ್ನು ನೆಲಕ್ಕೆ ಕೆಡವಿ, ಬೆನ್ನು ಹತ್ತಿ ಕೂತು, ಕೂದಲು ಜಗ್ಗಿ ಹೊಡೆಯುತ್ತಿದ್ದುದನ್ನು ನೋಡಿದ ಮಾವ ಕನಿಕರ ಪಟ್ಟು ಬಿಡಿಸಲು ಬಂದ. ಆಗ ಹೆಂಡತಿಯ ಬಾಯಿಂದ ಹೊರಹೊಮ್ಮಿದ ಅಶ್ಲೀಲ ಬೈಗುಳಗಳನ್ನು ಕೇಳಿದ ಮಾವ ಕಿವಿ ಮುಚ್ಚಿಕೊಂಡು ಹೊರಗೆ ಓಡಿ ಹೋದದ್ದನ್ನು, ಮೊದಲಿಗಿಂತ ಇಮ್ಮಡಿ ಸಿಟ್ಟಿನಿಂದ ಸಂಕ್ರವ್ವ ಸೊಸೆಯನ್ನು ಚಚ್ಚಿದ್ದನ್ನೂ ನೋಡಿದ ಜನ ಇನ್ನೂ ಮರೆತಿಲ್ಲ. ಚುಟುಕಾಕಾಯಿಸಿ ಕೊಟ್ಟ ಬರೆಗಳು ಮಾದವ್ವನ ಕಪ್ಪು ಮೈಯಲ್ಲಿ ಎದ್ದು ಕಾಣುತ್ತಿರಲಿಲ್ಲ. ತಾನು ಪರಿಪರಿಯಾಗಿ ಪೀಡಿಸಿದರೆ ಸೊಸೆ ಮನೆ ಬಿಟ್ಟು ಓಡಿ ಹೋದಾಳು, ಆಗ ಮಗನಿಗೆ ಇನ್ನೊಬ್ಬ ಚೆಲುವೆಯನ್ನು ತರಲು ಅನುಕೂಲವಾಗುತ್ತದೆಯೆಂದು ಸಂಕ್ರವ್ವನ ಪ್ಲ್ಯಾನ್ ಇತ್ತೆಂದು ಅವಳನ್ನು ಹತ್ತಿರದಿಂದ ಬಲ್ಲವರು ಹೇಳುತ್ತಾರೆ. ಆದರೆ ಅವಳ ಆಸೆ ಈಡೇರಲಿಲ್ಲ. ಮಾದವ್ವ ಮೊಂಡು ಹೆಣ್ಣು; ಉಣ್ಣಲು ಉಡಲು ಕಡಿಮೆಯಿಲ್ಲದ ಅತ್ತೆಯ ಮನೆ ಬಿಟ್ಟು, ಕೂಳಿಗೆ ದಿಕ್ಕಿಲ್ಲದ, ಅವ್ವ-ಅಪ್ಪನೂ ಇಲ್ಲದ ತವರಿಗೆ ಅವಳೇಕೆ ಹೋದಾಳು ? ನೆಲ ಕಚ್ಚಿ ಹಿಡಿದು ನಿಂತಳು.

'ಅತ್ತೆಗೊಂದು ಕಾಲ, ಸೊಸೆಗೊಂದು ಕಾಲ' ಎಂದು ಹಿರಿಯರು ಗಾದೆ ಮಾಡಿದ್ದು ಸುಳ್ಳಲ್ಲ. ಒಂದು ದಿನ ಸಿಟ್ಟಿನ ಆವೇಶದಲ್ಲಿ ಸೊಸೆಯನ್ನು ಬೆನ್ನಟ್ಟಿ ಹೊಡೆಯಲು ಹೋದ ಸಂಕ್ರವ್ವ ಜೋಲಿತಪ್ಪಿ ಪಡಸಾಲೆಯ ಕಟ್ಟೆಯ ಮೇಲಿಂದ ಬಿದ್ದು ನಡ ಮುರಿದುಕೊಂಡಳು. ಅತ್ತೆ ಹಾಸಿಗೆ ಹಿಡಿದ ಮೇಲೆ ಮಾದವ್ವ ನೇಟಾದಳು. ಮನೆಯ ಯಜಮಾನಿಕೆ ಅವಳ ಕೈಗೇ ಬಂದಿತು. ಸಂಕ್ರವ್ವ ಏರಡು ವರ್ಷ ನರಳಿ ನರಳಿ, ಕೂಳು, ನೀರು, ಉಪ ಚಾರವಿಲ್ಲದೆ ಹಲುಬಿ ಹಲುಬಿ ಒಂದು ದಿನ ಸತ್ತಳು. ಯಾರಾದರೂ ಓಣಿಯ ಅಕ್ಕವ್ವಗಳು ಅತ್ತೆಯ ಉಪಚಾರ ಮಾಡಬೇಕೆಂದು ಬುದ್ಧೀ ಹೇಳಲು ಬಂದರೆ ಅವಳ ಮೈಯ ಮಾಂಸವನ್ನೇ ಹರಿದು ತಿನ್ನುವಂತೆ ಮಾದವ್ವ ಜಗಳಕ್ಕೆ ಹೋಗುತ್ತಿದ್ದಳು. ಅತ್ತೆ ಸತ್ತದ್ದು ಗೊತ್ತಾದೊಡನೆ ಚರಿಗೆ ಹಾಲು ಕುಡಿದು ಬಂದು, ಸಿಂಗಾರ ಮಾಡಿದ ಹೆಣದ ಮುಂದೆ ಕೂತು, ತನ್ನನ್ನು ಕಾಡಿಸಿ, ಪೀಡಿಸಿದ ಅತ್ತೆ ನರಕಕ್ಕೆ ಹೋದಳೆಂದು ಹಾಡಿ ಹಾಡಿಕೊಂಡು ಅತ್ತದ್ದು ಕೇಳಿ ಊರ ಅತ್ತೆಯರು ಸಿಟ್ಟಾದರೆ, ಸೊಸೆಯಂದಿರು ಸೆರಗಿನ ಮರೆ ಯಲ್ಲಿ ಕಿಸಿ ಕಿಸಿ ನಕ್ಕರು.

ಅತ್ತೆ ತೀರಿದೊಡನೆ ಮಾದವ್ವ ಮಾಡಿದ ಮೊದಲ ಕೆಲಸವೆಂದರೆ ತನ್ನ ತಂಗಿಯ ಮಗ ನಿಂಗಣ್ಣನನ್ನು ತಂದು ಸಾಕಿದ್ದು. ನಿಂಗಣ್ಣ ಬೆಳೆದದ್ದು ಮಾದ ವ್ವನ ನೆರಳಿನಲ್ಲಿಯೇ. ರೊಕ್ಕವಿಟ್ಟ ಟ್ರಂಕಿನ ಕೀಲಿಕೈ ಗುಂಡಗಡಿಗೆಗೆ ಕಟ್ಟಿ ಕೊಂಡು, ಗಂಡಸರಂತೆ ಹೊಲದಲ್ಲಿ, ಮನೆಯಲ್ಲಿ ದುಡಿಯುವ, ಎತ್ತರದ ನಿಲುವಿನ, ಕಪ್ಪು ಬಣ್ಣದ, ದೊಡ್ಡ ಬಾಯಿಯ ದೊಡ್ಡವ್ವನನ್ನು ಕಂಡರೆ ನಿಂಗಣ್ಣನಿಗೆ—ಅಷ್ಟೇ ಏಕೆ ಅವನ ದೊಡ್ಡಪ್ಪನಿಗೂ ಅಂಜಿಕೆ. ಈಗಲೂ ಅಂದರೆ, ಹೆಂಡತಿ ಬಂದ ಮೇಲೂ ನಿಂಗಣ್ಣ ದೊಡ್ಡವ್ವನೆದುರು ಬಾಯಿ ತೆರೆ ಯುತ್ತಿರಲಿಲ್ಲ. ಹೆಂಡತಿಯೆಂದರೆ ಅವನಿಗೆ ಬಹಳ ಪ್ರೀತಿ.

ಮುಂಜಾನೆಯಿಂದ ರಾತ್ರಿಯವರೆಗೆ ಕೆಲಸ ಮಾಡಿ ಹೈರಾಣಾಗಿ ಹಾಸಿ ಗೆಗೆ ಬಂದ ಚಿನ್ನವ್ವನನ್ನು ಅಪ್ಪಿಕೊಳ್ಳುತ್ತಾನೆ. ಹೆಂಡತಿಯ ಕಣ್ಣುಗಳಿಂದ ಸುರಿಯುವ ನೀರನ್ನು ಒರಸಿ ಮುದ್ದಿಸುತ್ತಾನೆ. ಅತ್ತೆಯ ಕಾಟದ ಬಗ್ಗೆ ಗಂಡನ ಮುಂದೆ ಚಿನ್ನವ್ವ ದೂರಿ ಕೊಂಡಾಗ ಮಾತ್ರ ಅವನು ನಿರ್ಲಿಪ್ತ

ಅಷ್ಟರಲ್ಲಿ ಅವನ ಪ್ರೀತಿಯ ಒರತೆ ಬರಿದಾಗಿರುತ್ತದೆ. ಬಹಳ ಪೀಡಿಸಿದಾಗ 'ನೀ ಆತು ಅವ್ವ ಆತು ನನಗೇನೂ ಗೊತ್ತಿಲ್ಲ' ಎಂದು ಮಗ್ಗುಲಿಗೆ ಹೊರಳಿ ಮುಸುಕು ಎಳೆಯುತ್ತಾನೆ. ಮುದ್ದಿನ ಮಗಳು ಚಿನ್ನವ್ವನನ್ನು 'ಅವ್ವ ಅವ್ವ' ಎಂದು ಬಾಯ್ತುಂಬ ಕರದು ಪ್ರೀತಿಸುವ ಗುರಪ್ಪ ಮಗಳನ್ನು ಇಂಥ ಮನೆಗೆ ಏಕೆ ಕೊಟ್ಟ?

ಇಂಥ ಮನೆ ಅನ್ನಲು ಏನಾಗಿದೆ? ಹೊಲವಿದೆ, ಮನೆಯಿದೆ. ಬೆಳ್ಳಿ ಬಂಗಾರವಿದೆ. ಉಣ್ಣಲು ಉಡಲು ಏನೂ ಕೊರತೆಯಿಲ್ಲ. ಸೊಸೆಯನ್ನು ಅಷ್ಟು ಬಯ್ದು, ಬಡಿದು ಮಾಡುವ ಮಾದವ್ವ ಊಟಕ್ಕೆ ಕೂತಾಗ 'ತವರ್ಮನಿಯವರಂತೂ ಬಿಕನಾಸಿಗೋಳು, ಇಲ್ಲಾದರೂ ಹಾಲು-ಬೆಣ್ಣೆ ಉಣ್ಣು' ಎಂದು ಹಂಗಿಸಿ ಚಿನ್ನವ್ವನ ಎಡೆಗೆ ಧಾರಾಳವಾಗಿ ನೀಡುತ್ತಾಳೆ. ಗುರಪ್ಪ ಅಷ್ಟು ಸ್ಥಿತಿವಂತನೇನೂ ಅಲ್ಲ, ಮನೆ ತುಂಬ ಮಕ್ಕಳು. ಆರು ಎಕರೆ ಹೊಲದಲ್ಲಿ ಹಳ್ಳವೂ ಹರಿದಿದೆ. ಮನೆ-ಮಂದಿ ಎಲ್ಲ ದುಡಿದರೂ ವರ್ಷಾನುಗಟ್ಟಲೆ ಉಣ್ಣುವಷ್ಟು ಕಾಳು ಸಿಗುವುದಿಲ್ಲ. ಆದರೆಗುರಪ್ಪ ಬಣವಿ ಒಟ್ಟುವುದರಲ್ಲಿ ಬಹಳ ಜಾಣ. ಅವನು ಒಟ್ಟಿದ ಬಣವಿ ಎತ್ತರವಾಗಿ ನೆಟ್ಟಗೆ ನಿಂತು ಗಟ್ಟಿ ಮುಟ್ಟಾಗಿರುತ್ತದೆ. ಎಂಥ ಗಾಳಿಗೂ ಜರಿಯುವುದಿಲ್ಲ, ಅವನ ಕೆಲಸ ಸುತ್ತ-ಮುತ್ತ ನಾಲ್ಕಾರು ಹಳ್ಳಿಗಳಿಗೂ ಗೊತ್ತು. ಎಲ್ಲರೂ ಬಣವಿ ಒಟ್ಟಲು ಗುರಪ್ಪನನ್ನೇ ಕರೆಯುತ್ತಾರೆ.

ತನ್ನ ಹೊಲದಲ್ಲಿ ದುಡಿಯಲು ಹೆಂಡತಿ ಮಕ್ಕಳಿಗೆ ಹಚ್ಚಿ, ಗುರಪ್ಪ ಕರೆದಲ್ಲಿಗೆ ಹೋಗುತ್ತಾನೆ. ಕೈ ತುಂಬ ರೊಕ್ಕ, ಕಾಳು ಸಂಪಾದಿಸುತ್ತಾನೆ. ಬಣವಿ ಒಟ್ಟುತ್ತಿರುವಾಗ ಇಲ್ಲವೆ ಬೇರೆ ಕೆಲಸ ಮಾಡುತ್ತಿರುವಾಗ ಅವನು ಸದಾ ಬಯಲಾಟದ ಮಟ್ಟುಗಳ್ನು ಹಾಡುತ್ತಾನೆ. ಅವನ ಹಾಡು ಕೇಳುತ್ತಿದ್ದರೆ ಜೊತೆಗೆ ಕೆಲಸ ಮಾಡುವವರಿಗೂ ದಣಿವು ಕಾಣುವುದಿಲ್ಲ. ಬಯಲಾಟ ಅವನ ಖಯಾಲಿ. ಸುತ್ತ ಯಾವ ಹಳ್ಳಿಯಲ್ಲಿ ಬಯಲಾಟವಾದರೂ ಅವನು ಹಾಜರ್. ಸ್ವತಃ ವೇಷ ಕಟ್ಟದಿದ್ದರೂ ಆಟವನ್ನು ಆರಿಸಿ, ಪಾತ್ರಗಳನ್ನು, ಹಂಚಿ, ತಾಲೀಮಿಗೆ ಜನರನ್ನು ಕೂಡಿಸಿ,

ಆಟದ ದಿನ ಎಲೆ–ಅಡಿಕೆ, ಬೀಡಿ, ಸೆರೆಯ ವ್ಯವಸ್ಥೆಯವರೆಗೆ ಎಲ್ಲ ಕೆಲಸಗಳಿಗೂ ಓಡಾಡುತ್ತಾನೆ. ಹಾಗೆ ತನ್ನೊಡನೆ ಬಯಲಾಟದ ಹಾಡಿಗೆ ಸೂರು ಹಿಡಿಯಲು ಬಂದ ನಿಂಗಣ್ಣನನ್ನು ನೋಡಿ ಆ ಮನೆಗೆ ತನ್ನ ಮಗಳನ್ನು ಕೊಡುವ ವಿಚಾರ ಮಾಡಿದ.

ಒಂದು ರೀತಿಯಲ್ಲಿ ಮಾದವ್ವ ಅವನಿಗೆ ದೂರದಿಂದ ಸಂಬಂಧವಾಗಬೇಕು. ಇಡೀ ಆಸ್ತಿಗೆಲ್ಲ ನಿಂಗಣ್ಣನೇ ಹಕ್ಕುದಾರ. ಯಾರ ಬಾಯಲ್ಲಿ ನೀರು ಬರುವದಿಲ್ಲ ? ಮಾದವ್ವನ ಮರ್ಜಿ ಹಿಡಿದು, ಹೊತ್ತು ಸಾಧಿಸಿ, ತನ್ನ ವಿಚಾರ ಅವಳ ಕಿವಿಯ ಮೇಲೆ ಹಾಕಿದ. ಚಿನ್ನವ್ವ ಕಣ್ಣು, ಮೂಗು ನೇರ. ನಡೆದರೆ ಅಂಗಾಲು ಕೆಂಪಾಗುವಂಥ ಮೈ ಬಣ್ಣ. ಹೆಸರಿಗೆ ತಕ್ಕ ಚಿನ್ನ. ಬಡವರ ಮನೆಯ ಹುಡುಗಿಯಾದರೆ ತನ್ನ ಮುಷ್ಟಿಯಲ್ಲಿ ಇರುವಳು. ಹಾಕಿದ್ದು ತಿಂದು, ಕೊಟ್ಟದ್ದು ಉಟ್ಟು, ಹೇಳಿದ ಹಾಗೆ ಕೇಳಿಕೊಂಡು ಬಿದ್ದಿರುವ ಸೊಸೆ ಸಿಕ್ಕರೆ ತಾನು ಚೆನ್ನಾಗಿ ದಬಾಯಿಸಿ ಅಧಿಕಾರ ಚಲಾಯಿಸಬಹುದು, ಎಂದು ಯೋಚಿಸಿದ ಮಾದವ್ವ ನಿಂಗಣ್ಣನನ್ನೂ ಕೇಳದೆ ತನ್ನ ಒಪ್ಪಿಗೆ ಕೊಟ್ಟಳು. ಚೆಂದುಳ್ಳಿ ಚೆಲುವಿ ಮಗ್ಗುಲಿಗೆ ಬಂದರೆ ಅವನಾದರೂ ಏಕೆ ಬೇಡವೆಂದಾನು ?

ಮಾದವ್ವ ಹುಬ್ಬಳ್ಳಿಯಿಂದ ಮದುವೆಯ ಬನಾರಸಿ ಸೀರೆ ತಂದಳು. ಬೆಳ್ಳಿಯ ನಡಪಟ್ಟಿ ಕಾಲಿನರುಳಿ, ಬಂಗಾರದ ಮುಡಿ ಉಂಗುರ ಸೊಸೆಗೆ ಹಾಕಿ ಊರ ಜನರ ಕಣ್ಣು ಕುಕ್ಕಿಸಿದಳು. ಅಂಥ ಜರಿ ಬುಟ್ಟಾದ ರೇಶಿಮೆ ಸೀರೆಯನ್ನು ಆ ಊರ ಸೊಸೆಯಂದಿರಲ್ಲಿ ಯಾರೂ ಉಟ್ಟಿರಲಿಲ್ಲ. ಎಲ್ಲರೂ ಚಿನ್ನವ್ವನ ದೈವವನ್ನು ಹಾಡಿ ಹೊಗಳಿದ್ದರು.

"ಹಬ್ಬಕ್ಕ ಚಿನ್ನವ್ವ ಬರತಾಳಿಲ್ಲೋ ಯಣ್ಣಾ" ಬಣವಿ ಒಟ್ಟುತ್ತಿದ್ದ ಗುರಪ್ಪನ ಕೈಗೆ ಹೊರೆ ಕೊಡುತ್ತ ಭೀಮವ್ವ ಕೇಳಿದಳು.

"ಎರಡ ವರಸ ಆತ ತಂಗೀ, ಚಿನ್ನವ್ವನ್ನ ಅವಳ ಅತ್ತಿ ತವರ್ಮನೀಗೆ ಕಳಿಸಲಾರದ, ನಿನಗೂ ಗೊತ್ತೈತಲ್ಲಾ. ಹಬ್ಬಕ್ಕ ಇನ್ನ ಎರಡ ದಿನಾ ಉಳೀತು, ಇನ್ನೂ ಸುದ್ದಿ ಇಲ್ಲಾ."

"ನೀಲವ್ವ ಮೊನ್ನಿ ಅಳಾಕ ಹತ್ತಿದ್ಲು ನನ್ನ ಮುಂದ. ತುಂಬಿದ ಮನ್ಯಾಗ ಸುಕದಿಂದ ಇರತಾಳಂತ ಮಗಳ್ನ ಕೊಟ್ಟರ ಈಗ ಆಕಿ ಮಾರಿ ಸುದ್ದಾ ಕಾಣ ವಾಲ್ಲು ನಮಗ ಅಂತ. ಮಾದವ್ವಗ ಮಗಳೂ ಆಕಿನ. ಸೊಸೀನೂ ಆಕಿನ. ಸೊಟ್ಟ ಆ ಸೀರಿ, ನಡಪಟ್ಟಿ ಸಲುವಾಗಿ ಬಂಗಾರದಂತಾ ಹುಡುಗಿ ಜೀವಾ ಹಿಂಡತಾಳ. ಹಿಂಗ ಆ ಕೂಸಿಗೆ ತರಾಸಕೊಟ್ರ ಶಿವಾ ಮೆಚ್ಚಾಕಿಲ್ಲಯಣ್ಣಾ."

"ಮದುವಿ ಆದ ವರಸ ಪಂಚಮಿ ಹಬ್ಬಕ್ಕ ಬರೂ ಮುಂದ ತನ ಸಡಗರಾ ತೋರಸಾಕ ಸೀರಿ ವಸ್ತಾ ಕೊಟ್ಟ ಮಾದವ್ವ ಕಳಿಸಿದ್ದ ಮುಳುವಾತ ನೋಡ ಭೀಮವ್ವಾ ನನ್ನ ಮಗಳಿಗೆ. ಇಡೀ ಮನೀ ಮಂದಿ ಎಲ್ಲಾ ಪಡಸಾಲಿ ಕಟ್ಟಿಮ್ಯಾಲೆ, ಅಡಗಿ ಮನ್ಯಾಗ ಮಲಗಿದಾಗ ಟ್ರಂಕು, ನಮ್ಮ ತೊಗರೀ ಚೀಲಾ ಹೊತಕೊಂಡ ಹೋಗ್ಯಾರ ನೋಡವ್ವ. ಏನೋ ಸಪ್ಪಳಾತಂತ ನವ್ಮವ್ವ ಎದ್ದಾಗ, ಕವಿ ನೆಳ್ಳಿನ್ಯಾಗ ಮನಶ್ಯಾರು ಹಿತ್ತಲ ಬಾಕಲಾಗಿಂದ ಓಡಿ ಹೊಗೂದ ನೋಡಿ ಲಬಾ ಲಬಾ ಹೊಯ್ಕೊಂಡ್ಲು. ನಮಗೆಲ್ಲಾ ಎಚ್ಚರಾತು. ಅಷ್ಟೊತ್ತಿಗೆ ಓಡಿ ಹೋಗಿದ್ರು ಸೂಳೀ ಮಕ್ಕಳು."

"ಚಿನ್ನವ್ವನ ಸೀರಿ, ವಸ್ತಾ ಎಲ್ಲಾ ತೊಗೊಂಡ ಆ ಟಿರಂಕ ಹಾಳ ಬಾವ್ಯಾಗ ಒಗದಿದ್ರಂತಲ್ಲ ?"

"ಹೌದಬೇ, ಎಡ್ಡ ವರ್ಸಾತು ಎಷ್ಟ ಹುಡುಕಿದರೂ ಕಳ್ಳರೂ ಸಿಗ ಲಿಲ್ಲಾ. ಆಗಿಂದ ಮಾದವ್ವ ಒಂದ ಸೂರು ಹಿಡದಾಳ. ನಾ ಹಾಕಿದ ಸೀರಿ, ವಸ್ತಾ ತಂದಕೊಡಸಿ ಮಗಳ್ನ ತವರ್ಮನಿಗೆ ಕರಕೊಂಡು ಹೋಗ್ರಿ ಅಂತ. ಕಳವು ಆದದ್ದು ನಾವ ಎಲ್ಲಿಂದ ಕೊಡೂಣ, ನೀನ ಹೇಳವ್ವ."

"ಅದೂ ಆತವ್ವ. ಮಗಳ ಮಾರಿಕಂಡರ ಸಾಕಂತ, ಇಕೀನೂ ಮನ್ಯಾ ಗಿಂದು ಚೂರಾ-ಪಾರಾ ಬಂಗಾರಾ ಕೊಟ್ಳು. ನಾನೂ ಅಷ್ಟ ರೊಕ್ಕಾ ಕೂಡಿ ಸಿದ್ದೆ. ಎಲ್ಲಾ ಕೂಡಿಸಿ ಐನೂರು ರೂಪಾಯಿ ಕೊಡಾಕ ಹೋಗಿದ್ದೆ. ಆದರ ಮಾದವ್ವಂದು ಒಂದ ಪಟ್ಟು—ನಾ ಹಾಕಿದ ಸೀರಿ, ಸಾಮಾನಾ ತಂದ ಕೊಡ್ರಿ ಅಂತ. ನಿಂಗಣ್ಣ ಅಂತೂ ಬಾಯಿ ಸತ್ತಾಂವಾ. ಎಲ್ಲಾ ಇಕೀದ ರಾಜ್ಯ ನೋಡ. ಏನ ಮಾಡಬೇಕ ತಿಳೀದಾಂಗ ಆಗೇತಿ. ಅಲ್ಲಿ ಆಕೀಗೂ ಒಂದಕ್ಕ

ಹತ್ತು ಮಾತಾಡಿ ಹಂಗಸತಾಳಂತ, ನನಗೂ ನೋಡಿ ನೋಡಿ ಸಾಕಾಗೇತಿ. ಏನರೆ ದಾರಿ ಹುಡುಕಬೇಕಾಗೇತಿ. ಈ ಸಾರೆ ಹಬ್ಬಕ್ಕ ನಾನು ಕರ್‍ಯಾಕ ಹೋಗತೇನಿ."

ಮರುದಿನವೇ ಮಾದವ್ವನ ನೆರೆಮನೆಯ ಪಾರಮ್ಮ ಧಾವಿಸಿ ಬಂದಳು. "ಗುರಪ್ಪಾ, ಇಂದ ನಸಿಕಿನ್ಯಾಗ ಚಿನ್ನವ್ವ ಕಣ್ಣು ಒರೆಸಿಕೋತ ಅಂಗಳ ಕಸಾ ಉಡುಗತಿದ್ಲು, ಮಾದವ್ವ ಒಳಗಿದ್ಲು. ನನಗ ಜೀಂವಾ ತಡೀಲಿಲ್ಲಾ. 'ಯಾಕು ಕೂಸು ಏನಾತು, ಯಾಕ ಅಳತೀ' ಅಂದೆ. 'ಎರಡ ವರ್ಸಾತು ನನ್ನ ತವರ್ಮನಿಗೆ ಕಳಿಸಿಲ್ಲಾ. ಸೊಸಿ ಸುಕದಕಿಂತಾ ನಿಮಗ ಸೀರಿ, ವಸ್ತ್ರಾನ ಹೆಚ್ಚಾತು. ಇಂತಾ ಸಿರಿವಂತಿಕೆ ಒಯ್ದು ಸುಡಬೇಕ ಅಂತ ಹೊಟ್ಟೆ ಉರದು ನಾನೂ ಒದರಾಡಿದೆ ಯಮ್ಮಾ. ನಮ್ಮತ್ತಿ ಚುಟುಕಾ ಕಾಸಿ ಬೆನ್ನಿಗೆ ಬರಿ ಎಳ ದಾಳಬೇ. ರಾತ್ರಿ ಎಲ್ಲಾ ಮಲಗಾಕ ಬರಲಿಲ್ಲಾ. ಕಣ್ಣಿಗೆ ಕಣ್ಣು ಹತ್ತ ಲಿಲ್ಲಾ. ನನಗ ಸಾವು ಬರವಲ್ದು' ಅಂತ ಅತ್ಲು ಚಿನ್ನವ್ವ, ನನಗ ಸಂಕ ಟಾತು ಗುರಪ್ಪಾ, ಹೇಳಾಕ ಬಂದೆ."

ಪಾರಮ್ಮನ ಮಾತು ಮುಗಿಯುವ ಮೊದಲೇ ಹೊಸಿಲು ದಾಟಿದ್ದ ಗುರಪ್ಪ ಬಯಲಾಟದ ಭೀಮನಂತೆ ಧಪ್ ಧಪ್ ಹೆಜ್ಜೆ ಹಾಕುತ್ತ ನಡೆದಿದ್ದ. ಅನ್ಯಾಯವನ್ನು ಸಹಿಸಿ ಸಹಿಸಿ ಅವನ ಸಿಟ್ಟು ಜ್ವಾಲೆಯಾಗಿ ಉರಿಯುತ್ತಿತ್ತು. ಕಣ್ಣು ಕೆಂಪಗಾಗಿ ಭುಜಗಳೆರಡೂ ಕಂಪಿಸುತ್ತಿದ್ದವು. ಅವನ ಅವತಾರ ನೋಡಿದ ಜನ ಹಾದಿ ಬಿಟ್ಟು ಹಿಂದೆ ಸರಿದರು. ಮಾದವ್ವನ ಮನೆಯ ಒಳ ಹೊಕ್ಕವನೇ ಹಕ್ಕೆಯಲ್ಲಿ ತೂಗು ಬಿದ್ದ ಬಾರುಕೋಲು ಎಳೆದುಕೊಂಡು ಪಡ ಸಾಲೆಯ ಕಟ್ಟೆ ಹತ್ತಿ ಮಾದವ್ವನ ಮೇಲೆ ಬೀಸಿದ. ಬೆದರಿದ ಮಾದವ್ವ ಚೀರಿದಳು. ಲಬೋ ಲಬೋ ಎಂದಳು. ನೆಲದ ಮೇಲೆ ಉರುಳಾಡಿದಳು. ಅವಳ ಸೀರೆ ಒದ್ದೆಯಾದರೂ ಗುರಪ್ಪ ಬಾರುಕೋಲು ಬೀಸುತ್ತಲೇ ಇದ್ದ. ಮಾವನ ಮುಖ ಕಂಡ ಕೂಡಲೆ ನಿಂಗಣ್ಣ ಕಟ್ಟೆ ಇಳಿದು ಪರಾರಿಯಾಗಿದ್ದ. ಚಿನ್ನವ್ವ ಅಡಿಗೆಮನೆಯ ಬಾಗಿಲಿಗೆ ನಿಂತ ಕಲ್ಲುಗೊಂಬೆಯಾಗಿದ್ದಳು. ಓಣಿಯ ಜನರೆಲ್ಲ ತಲೆ ಬಾಗಿಲು ತುಂಬ ನಿಂತಿದ್ದರು. ಕೈಸೋತ ಗುರಪ್ಪ ಬಾರ

ಕೋಲು ಬೀಸಿ ಒಗೆದವನೇ, "ಚಿನ್ನವ್ವಾ, ನಡೀ ಮನೀಗೆ. ನಿಮ್ಮವ್ವ ಹಾದೀ ನೋಡತಾಳು" ಎಂದು ಮಗಳನ್ನು ಮುಂದಿಟ್ಟುಕೊಂಡು ಬಿರಬಿರನೆ ಹೊರ ನಡೆದ.

ಕತೆ ಇಲ್ಲಿಗೇ ಮುಗಿಯಲಿಲ್ಲ. ಚಿನ್ನವ್ವ ತವರ್ಮನೆಯಲ್ಲಿ ನಾಗರ ಪಂಚಮಿ ಹಬ್ಬ ಮಾಡಿ ಅತ್ತೆ ಮನೆಗೆ ಬಂದಳು. ಅವಳೀಗ ಆರುಮಕ್ಕಳ ತಾಯಿ. ಗುರಪ್ಪ ಆಗಾಗ ಮಕ್ಕಳ ಮನೆಗೆ ಹೋಗಿಮೊಮ್ಮಕ್ಕಳನ್ನು ಆಡಿಸಿ, ನಕ್ಕು, ನಲಿದು ಮಾದವ್ವನೊಡನೆ ಹರಟೆ ಹೊಡೆದು ಬರುತ್ತಾನೆ. ಹಕ್ಕೆಯಲ್ಲಿ ತೂಗುಬಿದ್ದ ಬಾರುಕೋಲು ಚಿನ್ನವ್ವನಿಗೊಂದು ಪಾಠ ಹೇಳುತ್ತಿರುವಂತೆ ಕಾಣುತ್ತದೆ.

●

## ಶಾಂತಾದೇವಿ ಕಣವಿಯವರ ಇತರ ಕೃತಿಗಳು

**ಸಣ್ಣಕಥೆ**

* ಸಂಜೆಮಲ್ಲಿಗೆ ೧೯೬೭, ೧೯೭೧
* ಬಯಲು–ಆಲಯ ೧೯೭೩, ೧೯೭೪, ೧೯೭೫
* ಮರುವಿಚಾರ ೧೯೭೮
* ಜಾತ್ರೆ ಮುಗಿದಿತ್ತು ೧೯೮೧

**ಹರಟೆ–ಪ್ರಬಂಧ**

* ಅಜ ಗಜಾಂತರ ೧೯೮೩

**ಮಕ್ಕಳಿಗಾಗಿ**

* ನಿಜಗುಣ ಶಿವಯೋಗಿ ೧೯೭೪



ಕನ್ನಡ ಕಥಾಲೋಕಕ್ಕೆ ಶ್ರೀಮತಿ ಶಾಂತಾದೇವಿ ಕಣವಿಯವರು ಕಾಲಿರಿಸಿ ಎರಡು ದಶಕಗಳು ಸಂದಿವೆ. ೧೯೬೭ ರಲ್ಲಿ "ಸಂಜೆ ಮಲ್ಲಿಗೆ" ಪ್ರಕಟವಾದ ಮೇಲೆ ಇದೀಗ ಅವರ ಐದನೆಯ ಕಥಾಸಂಗ್ರಹ 'ಕಳಚಿ ಬಿದ್ದ ಪೈಜಣ' ಓದುಗರ ಕೈಸೇರುತ್ತಿದೆ. ಸಂಕಲನದಿಂದ ಸಂಕಲನಕ್ಕೆ ತಮ್ಮ ಬರಹದ ಶೈಲಿಯನ್ನು ಮಾತ್ರವಲ್ಲ, ಬದುಕಿನ ನೋಟವನ್ನು, ಮೌಲಿಕ ನಿಲುಮೆಗಳನ್ನು ಬದಲಿಸುತ್ತ ಅಂತಸ್ಸತ್ವದಲ್ಲಿ ಅವರು ಸುಸಂಬದ್ಧವಾಗಿ ಬೆಳೆಯುತ್ತ ಬಂದಿದ್ದಾರೆ.

ಹೆಣ್ಣಿನ ಒಡಲ ಸಂಕಟವನ್ನು ಹೃದಯವಿದ್ರಾವಕವಾಗಿ ತೆರೆದಿಡುವುದರ ಜೊತೆಗೆ ಪುರುಷ ಪ್ರಧಾನ ಕುಟುಂಬ–ಸಮಾಜ ವ್ಯವಸ್ಥೆಯಲ್ಲಿ ತುಳಿಯಲ್ಪಡುವ ಆಕೆಯ ದುರವಸ್ಥೆಯ ಕಾರ್ಯಕಾರಣ ಸಂಬಂಧವನ್ನು ಅನುಕಂಪ ಸಹಾನುಭೂತಿ ಮತ್ತು ಸೌಮ್ಯ ಕನಲುವಿಕೆಯಿಂದ ವಿಶ್ಲೇಷಿಸುವ ಶಾಂತಾದೇವಿಯವರ ಅನುಸಂಧಾನ ವಸ್ತು ನಿಷ್ಠೆಯತ್ತ ಒಲಿಯುತ್ತ ಬಂದಿರುವುದು ಗಮನಾರ್ಹವಾಗಿದೆ. ಯಾವುದು ಆತ್ಮಿಕ ವಿಷಯವೋ, ಪರಿಸರದಿಂದ ಬಂದು ಅಂತರಂಗ ಸಂಕೇತವಾಗಿ ಪರಿವರ್ತನೆಗೊಳ್ಳುವ ಅನುಭವವೊ, ಯಾವುದು ಅವರ ಸುಕುಮಾರ ಸಂವೇದನೆಗೆ ಒಳಪಟ್ಟಿದೋ ಅದರ ಚಿತ್ರಣದಲ್ಲಿ ಇವರು ಪಡೆದ ಯಶಸ್ಸು ಮಹಿಳೆ ಕುಳಿತಲ್ಲಿಯೇ ಏನು ಸಾಧಿಸಬಲ್ಲಳೆಂಬುದಕ್ಕೆ ಒಂದು ಉತ್ತಮ ನಿದರ್ಶನ.